# ಮುನ್ನುಡಿ

ದಾದಾಭಾಯಿ ನವರೋಜಿಯವರ ಈ ಸಂಕ್ಷೇಪವಾದ ೀವನ ಚರಿತ್ರೆ ಸುಮಾರು ೩೨ ವರ್ಷಗಳ ಹಿಂದೆ (೧೯೧೮) ೂದಲು ಪ್ರಕಟವಾದದ್ದು. ಈಗ ಅದನ್ನು ಅಲ್ಲಲ್ಲಿ ಸ್ವಲ್ಪ ವಿಸ್ತರಿಸಿ ಿಷ್ಕಾರ ಮಾಡಿ ಪ್ರಕಟಿಸಿದೆ.

ಈ ಎರಡನೆಯ ಸಲದ ಪ್ರಕಟನೆಗೆ ಸಹಾಯ ಕೊಟ್ಟಿರುವ ್ಯಾಪಾರ ಪ್ರಕಟನ ಕರ್ತರಿಗೂ (ಅಡ್ವರ್ಟೈಸರ್ಸ್) ಮತ್ತು ಇತರ ೀಹಿತರಿಗೂ ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯ ್ಯಸಂಗ ಗೋಷ್ಠಿ ಕೃತಜ್ಞತೆಯಿಂದ ವಂದನೆಗಳನ್ನರ್ಪಿಸುತ್ತದೆ.

ನಮ್ಮ ದೇಶದ ರಾಜಕೀಯದ ಚರಿತ್ರೆಯನ್ನು ಮಹಾಜನರು ಿದುಕೊಳ್ಳುವುದು ಈಗ ತುಂಬ ಅವಶ್ಯವಾಗಿದೆ. ಆ ಬಗ್ಗೆ ಸಣ್ಣ ಪುಸ್ತಕ ಸಹಾಯವಾದೀತೆಂದು ಗೋ|| ಸಾ|| ವಿ|| ಸಂ|| ್ಯಸಂಗಗೋಷ್ಠಿ ನಂಬಿ, ಇದಕ್ಕೆ ಮಹಾಜನರ ಆದರಣೆಯನ್ನು ್ರಾರ್ಥಿಸಿ ನಿರೀಕ್ಷಿಸಿಕೊಂಡಿದೆ.

ಭಾರತೀಯ ಮಹಾ ಕುಲವೃದ್ಧ



ದಾದಾಭಾಯಿ ನವರೋಜಿಯವರು

ಜನನ ೧೮೨೫ ಮರಣ ೧೯೧೭

I have received your kind letter of
9 September – Please excuse delay.
With the letter are enclosed – copy of
the Proceedings of the meeting of the
League, copy of the Articles which
appeared in the Karnataka, my portrait
and a kind poem
I need not tell you how grateful and
thankful I am at all this very kind
expression of good wishes and words
on the occasion of my 91st birth day
May I commence my most sincere
thanks to all kind friends who
have taken part in all these
kind matters

With best wishes

Yours sincerely

Dadabhai Naoroji

ದಾದಾಭಾಯಿ ನವರೋಜಿಯವರ ಹಸ್ತಾಕ್ಷರ

# ವಿಷಯ ಸೂಚಿಕೆ



ಪುಟ

೧. ಮುನ್ನುಡಿ ೩

೨. ದಾದಾಭಾಯಿ ನವರೋಜಿಯವರು (ಚಿತ್ರ) ೪

೩. ದಾದಾಭಾಯಿ ನವರೋಜಿಯವರ ಹಸ್ತಾಕ್ಷರ (ಪತ್ರ) ೫

೪. ಜೀವನ ಚರಿತ್ರೆ ೭–೩೨

ಪೀಠಿಕೆ (ಪುಟ ೭), ಮೊದಮೊದಲಿನ ದಿನಗಳು (೮), ಇಂಗ್ಲೆಂಡು ಪ್ರವಾಸ (೧೦), ಮೈಸೂರಿನ ಸ್ನೇಹಿತರು (೧೨) ಸ್ವದೇಶದಲ್ಲಿ (೧೩), ಕಾಂಗ್ರೆಸ್ ಸ್ಥಾಪನೆ (೧೪), ಪಾರ್ಲಿಮೆಂಟು ಮೆಂಬರು (೧೬), "ಇಂಡಿಯಾ" ಪತ್ರಿಕೆ (೧೮) ಚಿನ್ನದ ಗಣಿ (೨೦), ಕಬ್ಬಿಣದ ಗಣಿ (೨೨) ಲೇಖನ ಸಂಗ್ರಹ (೨೫), ಸ್ವರಾಜ್ಯ ಘೋಷಣೆ (೨೬), ಕಡೆಯ ದಿನಗಳು (೨೮), ನೀತಿಸಂಗ್ರಹ (೩೦).

೫. ಭಾಷಣ ಲೇಖನಗಳಲ್ಲಿ ಅತಿ ಮುಖ್ಯವಾದವು ೩೩

೬. ಗುಣಮಣಿಮಾಲೆ ೪೦

# ದಾದಾಭಾಯಿ ನವರೋಜಿ

## ಭಾರತೀಯ ಮಹಾ ಕುಲವೃದ್ಧರು

### ಪೀಠಿಕೆ

ಒಂದು ಜನಾಂಗದ ಚರಿತ್ರೆ ಒಂದು ಮಹಾಪುರಾಣದಂತೆ. ದು ಒಂದು ದಿವಸದ ಅಥವಾ ಒಂದು ವರ್ಷದ ಕಥೆಯಲ್ಲ; ಬ್ಬ ಮನುಷ್ಯನ ಅಥವಾ ಒಂದು ಸಣ್ಣ ಗುಂಪಿನ ಕಥೆಯಲ್ಲ. ದು ಹತ್ತಾರು ವರ್ಷಕಾಲ ಸಾವಿರಾರು ಮಂದಿಯಿಂದ ಕೂಡಿ ಡೆದುಕೊಂಡು ಬಂದಿರುವ ವಿಸ್ತಾರ ಪ್ರಸಂಗ.

ನಮ್ಮ ಇಂಡಿಯ ದೇಶ ಈಗ ಪರದೇಶದ ಕೈಹಿಡಿತದಿಂದ ಡಿಸಿಕೊಂಡು ಸ್ವತಂತ್ರವಾಗಿದೆಯಷ್ಟೆ? ಈ ಸ್ವಾತಂತ್ರ್ಯದ ಕಥೆ ೊಡ್ಡದು. ಅದರಲ್ಲಿ ನಾಲ್ಕಾರು ಮಂದಿ ಮಹಾ ಪುರುಷರು ಸಿದ್ಧರಾಗಿದ್ದಾರೆ. ಅವರಲ್ಲಿ ಮಹಾತ್ಮ ಗಾಂಧಿಯವರು ಈಗ ಜಗ ನ ಎಲ್ಲ ದೇಶಗಳಲ್ಲಿಯೂ ಪ್ರಖ್ಯಾತರಾಗಿದ್ದಾರೆ. ಆದರೆ ನಮ್ಮ ್ವತಂತ್ರ್ಯ ಸಂಪಾದನೆಯ ಪ್ರಯತ್ನದಲ್ಲಿ ಮೊದ ಮೊದಲು ಜ್ಜೆಯಿಟ್ಟವರು ಗಾಂಧಿಯವರಿಗಿಂತ ಹಿಂದಿನವರು. ಅವರಲ್ಲೊ ರು ದಾದಾಭಾಯಿ ನವರೋಜಿಯವರು. ನವರೋಜಿಯವರಲ್ಲಿ ಾಂಧಿಯವರು ಗುರುಭಕ್ತಿಯಿಟ್ಟಿದ್ದರು. ಯಾವ ಗೋಖಲೆಯ ರನ್ನು ಗಾಂಧಿಯವರು ತಮ್ಮ ಇಷ್ಟ ಗುರುವೆಂದು ಭಾವಿಸಿ ೊಂಡಿದ್ದರೋ ಆ ಗೋಖಲೆಯವರು ನವರೋಜಿಯವರನ್ನು ಮ್ಮ ಸಾಕ್ಷಾದ್ಗುರುತ್ರಯದಲ್ಲಿ ಒಬ್ಬರೆಂದು ತಿಳಿದಿದ್ದರು. *

---

* ನವರೋಜಿಯವರ ವಿಷಯದಲ್ಲಿ ಗೋಖಲೆಯವರು ಹೇಳಿರುವ ರಸ ತವಾದ ವಾಕ್ಯಗಳನ್ನು ಪ್ರಕೃತದ ಲೇಖಕನ "ಗೋಖಲೆಯವರ ಜೀವನ ತ್ರೆ ಮತ್ತು ಉಪನ್ಯಾಸಗಳು" ಎಂಬ ಪುಸ್ತಕದಲ್ಲಿ ಓದಬಹುದು.

ಒಂದು ದೇಶದ ಜನತೆಯ ಜೀವನ ಒಂದು ದೊಡ್ಡ ನದಿಯ ಪ್ರವಾಹದಂತೆ. ಕಾವೇರೀನದಿ ಅದರ ಹುಟ್ಟುನಾಡಾದ ಕೊಡಗಿನಲ್ಲಿ ಸಣ್ಣ ಹೊಳೆಯಂತೆ ಕಾಣುತ್ತದೆ, ಸಮುದ್ರ ಸೇರುವ ಬಳಿ ಕೊಲ್ಲಡಂ ಎಂಬಲ್ಲಿ ಸಮುದ್ರದಂತೆ ಅಪಾರವಾಗುತ್ತದೆ. ಅದು ಹಾಗೆ ಬೆಳೆಯಲು ಅದರ ದಾರಿಯಲ್ಲಿ ನೂರಾರು ತೊರೆಗಳೂ ಹಳ್ಳಗಳೂ ಹೊಳೆಗಳೂ ಈ ಪಕ್ಕ ಆ ಪಕ್ಕಗಳಿಂದ ಹರಿದುಬಂದು ಅಲ್ಲಲ್ಲಿ ಅದರೊಳಕ್ಕೆ ಸೇರಿದ್ದು ಕಾರಣವಲ್ಲವೆ? ಹಾಗೆ ಕಾಲಾನುಕಾಲದಲ್ಲಿ ಆದ ಬೆಳೆವಣಿಗೆ ನಮ್ಮ ಸ್ವಾತಂತ್ರ್ಯ ಸಮಾರಂಭದ್ದು. ಈ ನದಿ ಗಾಂಧಿ ಘಟ್ಟದಲ್ಲಿ ಇಷ್ಟು ದೊಡ್ಡದಾಗಲು ಅದಕ್ಕೆ ಎಷ್ಟೋ ಉಪನದಿಗಳು ಸೇರಬೇಕಾದದ್ದಿತ್ತು. ಅದಕ್ಕೆ ಕಾಲ ಸಹಾಯ ಬೇಕಿತ್ತು. ಅಲ್ಲಿಯವರೆಗೆ ಆ ನದಿಯನ್ನು ಹರಿಸಿಯಿಕೊಂಡುಬಂದು ಉಪನದಿಗಳ ಬರುವಿಕೆಗೆ ಅನುಕೂಲ್ಯವನ್ನುಂಟುಮಾಡಿದವರು ಗಾಂಧಿಯವರ ಪೂರ್ವಾಚಾರ್ಯರು. ಆ ಹಿರಿಯ ದೇಶಭಕ್ತರೂ ಗಾಂಧಿಯವರಂತೆಯೇ ನಮ್ಮ ಭಕ್ತಿ ಕೃತಜ್ಞತೆಗಳಿಗೆ ಅಧಿಕಾರಿಗಳಾಗಿದ್ದಾರೆ. ಅವರಲ್ಲಿ ಅಗ್ರಗಣ್ಯರು ದಾಪಾಭಾಯಿ ನವರೋಜಿಯವರು.

## ಮೊದಮೊದಲಿನ ದಿನಗಳು

ನವರೋಜಿಯವರು ೧೮೨೫ನೆಯ ಇಸವಿ ಸೆಪ್ಟೆಂಬರ್ ತಾ|| ೪ನೆಯ ದಿನ ಬೊಂಬಾಯಿ ಪಟ್ಟಣದಲ್ಲಿ ಪಾರಸೀಜನಾಂಗದ ಒಂದು ವೈದಿಕವಂಶದಲ್ಲಿ ಹುಟ್ಟಿದರು. ಪಾರಸೀಕರು ಝರೋಸ್ಟ್ರ ಮತದವರು, ಅಗ್ನಿ ಪೂಜಕರು. ಅವರ ಪೂರ್ವಿಕರೂ ನಮ್ಮ ಪುರಾತನರಾದ ಆರ್ಯರೂ ಒಂದೇ ಬುಡಕಟ್ಟಿಗೆ ಸೇರಿದವರೆಂದು ಶಾಸ್ತ್ರಜ್ಞರ ಹೇಳಿಕೆ. ನವರೋಜಿಯವರಿಗೆ ಅವರ ನಾಲ್ಕನೆಯ ವರ್ಷದಲ್ಲಿಯೇ ಪಿತೃವಿಯೋಗವಾಗಿ, ಬಳಿಕ ಅವರು ತಾಯಿ

ಸೋದರಮಾವ- ಇವರ ಪೋಷಣೆಯಲ್ಲಿ ಬೆಳೆದರು. ಬೊಂಬಾಯಲ್ಲಿ "ಎಲ್ಫಿನ್‌ಸ್ಟನ್ ಕಾಲೇಜು" ಎಂದು ಈಗಿಗೂ ಹೆಸರುಗೊಂಡಿರುವ ಪಾಠಶಾಲೆಯಲ್ಲಿ ಅವರು ವಿದ್ಯಾಭ್ಯಾಸಮಾಡಿ, ಪ್ರತಿವರ್ಗದಲ್ಲಿಯೂ ಉತ್ತಮ ಸ್ಥಾನವನ್ನು ಸಂಪಾದಿಸಿ, ಬಹುಮಾನವನ್ನು ಪಡೆದು, ೧೮೪೫ ರಲ್ಲಿ ವಿದ್ಯಾರ್ಥಿದಶೆಯನ್ನು ಮುಗಿಸಿದರು. ಆಗ ಬೊಂಬಾಯಿ ಹೈಕೋರ್ಟಿನ ಮುಖ್ಯ ಜಡ್ಜಿಯಾಗಿದ್ದ "ಸರ್ ಅರ್‌ಸ್ಕಿನ್ ಪೆರ್ರಿ" ಎಂಬಾತನು ನವರೋಜಿಯ ಮೇಧಾಶಕ್ತಿಯನ್ನೂ ವಿದ್ಯಾಸಕ್ತಿಯನ್ನೂ ಕಂಡು ಸಂತೋಷಿಸಿ, ಆ ತರುಣನು ಇಂಗ್ಲೆಂಡಿಗೆ ಹೋಗಿ ಬ್ಯಾರಿಸ್ಟರ್ ಪರೀಕ್ಷೆಗೆ ಓದುವುದಾದರೆ ಅದಕ್ಕೆ ಬೇಕಾಗುವ ಖರ್ಚಿನಲ್ಲಿ ಅರ್ಧವನ್ನು ತಾನು ಕೊಡುವುದಾಗಿ ಹೇಳಿದನು. ಆದರೆ ಆ ಕಾಲದಲ್ಲಿ ಸಮುದ್ರಯಾನವು ಪಾರಸೀಮತದವರಲ್ಲಿ ರೂಢಿಗೆ ಬಂದಿರಲಿಲ್ಲವಾಗಿ, ನವರೋಜಿಯವರು ಪೆರ್ರೀಯವರ ವಿಶ್ವಾಸದಿಂದ ಪ್ರಯೋಜನ ಹೊಂದಲಾಗಲಿಲ್ಲ. ತಾವು ಓದಿದ ಕಲಾಶಾಲೆಯಲ್ಲಿಯೇ ಉಪಾಧ್ಯಾಯವೃತ್ತಿಯನ್ನು ಕೈಕೊಂಡರು. ಅಲ್ಲಿಯೇ ಅವರ ಸಾಮರ್ಥ್ಯವೂ ಶ್ರದ್ಧೆಯೂ ಅವರನ್ನು ಮುಂದಕ್ಕೆ ತಂದವು. ೧೮೫೪ರಲ್ಲಿ ಅವರು ಗಣಿತಶಾಸ್ತ್ರ ಭೌತವಿಜ್ಞಾನಗಳನ್ನು ಬೋಧಿಸುವ ಪ್ರೊಫೆಸರ್ (ಪಂಡಿತ) ರಾಗಿ ನಿಯಮಿಸಲ್ಪಟ್ಟರು. ಆಂಗ್ಲೇಯ ಪ್ರೌಢ ವಿದ್ಯಾಲಯದಲ್ಲಿ "ನೇಟಿವ್" ಅಥವಾ ದೇಶೀಯ ಜನರು ಪ್ರೊಫೆಸರ್ ಪದವಿಯನ್ನು ಪಡೆಯುವುದಕ್ಕೆ ಅದೇ ಮೊದಲು. ಆ ಪದವಿಯ ಕರ್ತವ್ಯ ನಿರ್ವಾಹದಲ್ಲಿ ನವರೋಜಿಯವರು ತೋರಿಸುತ್ತಿದ್ದ ಪ್ರತಿಭಾವಿಶೇಷವನ್ನೂ, ಶಾಸ್ತ್ರ ನೈಪುಣ್ಯವನ್ನೂ, ಶಿಷ್ಯ ವಾತ್ಸಲ್ಯವನ್ನೂ ಆ ವಿದ್ಯಾಕ್ಷೇತ್ರದ ಸಂಬಂಧವಿದ್ದವರೆಲ್ಲ ಸ್ವಾನುಭವದಿಂದ ತಿಳಿದುಕೊಂಡು, ಕೊಂಡಾಡುತ್ತಿದ್ದರು.

ನವರೋಜಿಯವರ ದೇಶಸೇವೋದ್ಯಮವು ಇದಕ್ಕೆ ಮೊದಲೇ ಪ್ರಾರಂಭವಾಗಿತ್ತು. ಬೊಂಬಾಯಲ್ಲಿ ವಿದ್ಯಾರ್ಥಿಗಳು ಸಭೆಸೇರಿ ಉಪನ್ಯಾಸ ಚರ್ಚೆಗಳ ಮೂಲಕ ಜ್ಞಾನಾಭಿವೃದ್ಧಿ ಪಡೆಯಲು ಒಂದು ಸಂಘವನ್ನೇರ್ಪಡಿಸಿ, ಅದಕ್ಕೆ ಸಂಬಂಧಪಟ್ಟಂತೆ ಒಂದು ಮಾಸಪತ್ರಿಕೆಯನ್ನು ಪ್ರಕಟಿಸುವುದಕ್ಕೂ ಅವರು ಉಪಕ್ರಮಿಸಿದ್ದರು. ಆ ಸಂಘಕ್ಕೆ "ಜ್ಞಾನಪ್ರಸಾರಕ ಮಂಡಲಿ" ಯೆಂಬ ಶಾಖೆಯನ್ನೇರ್ಪಡಿಸಿ, ಅದರ ಮೂಲಕ ಮಹಾರಾಷ್ಟ್ರ ಗುಜರಾತೀ ಭಾಷೆಗಳಲ್ಲಿ ಸಾಮಾನ್ಯ ಜನರಿಗೆ ಆವಶ್ಯ ತಿಳಿಯಬೇಕಾದ ವಿಷಯಗಳನ್ನು ಕುರಿತು ಉಪನ್ಯಾಸಕೊಡುತ್ತಲೂ ಕೊಡಿಸುತ್ತಲೂ ಇದ್ದರು. ಬೊಂಬಾಯಿಪಟ್ಟಣದ ಮೊಟ್ಟಮೊದಲನೆಯ ಬಾಲಿಕಾ ಪಾಠಶಾಲೆಯು ನವರೋಜಿಯವರಿಂದ ಸ್ಥಾಪಿತವಾದದ್ದು. ಇತರ ಅನೇಕ ವಿದ್ಯಾಲಯಗಳನ್ನೂ ಸಭೆಗಳನ್ನೂ ಸ್ಥಾಪಿಸುವುದರಲ್ಲಿ ಅವರು ಪ್ರಮುಖರಾಗಿದ್ದದ್ದಲ್ಲದೆ, ೧೮೫೧ ರಲ್ಲಿ 'ರಾಸ್ತ್ ಗೋಫ್ತಾರ್' (ಸತ್ಯವಾದಿ) ಎಂಬ ಗುಜರಾತೀ ವಾರಪತ್ರಿಕೆಯನ್ನು ಪ್ರಕಟಿಸುತ್ತಿದ್ದರು. ಆಗ ಅವರು ಪ್ರಾರಂಭಿಸಿದ ಅನೇಕ ಕೆಲಸಗಳು ಈಗಿಗೂ ನಿಂತು ಅಭಿವೃದ್ಧಿಹೊಂದುತ್ತಿವೆ.

## ಇಂಗ್ಲೆಂಡು ಪ್ರವಾಸ

ಹೀಗೆ ಕೆಲವು ವರ್ಷಗಳಾದ ತರುವಾಯ ಇಂಗ್ಲೆಂಡಿಗೆ ಪ್ರಯಾಣಮಾಡಲು ನವರೋಜಿಯವರಿಗೆ ಪುನಃ ಅವಕಾಶ ದೊರೆಯಿತು. ಆಗ ಲಂಡನ್ ಪಟ್ಟಣದಲ್ಲಿ ವ್ಯಾಪಾರಮಾಡುತ್ತಿದ್ದ "ಕಾಮಾ ಅಂಡ್ ಕೊ" ಎಂಬ ಪಾರಸೀ ವರ್ತಕ ಸಂಘದ ಕಾರ್ಯದರ್ಶಿ (ಮ್ಯಾನೇಜರ್) ಪದವಿಯು ನವರೋಜಿಯವರಿಗೆ ಲಭ್ಯವಾಯಿತು. ಈ ಸಂದರ್ಭದಲ್ಲಿ ಅವರು ತಮ್ಮ ಸಮಾಜದ

ಮೂಢಸಂಪ್ರದಾಯವನ್ನು ಲೆಕ್ಕಿಸದೆ, ೧೮೫೬ ರಲ್ಲಿ ಹಡಗು ಹತ್ತಿದರು.

ಇಂಗ್ಲೆಂಡಿಗೆ ಹೋದಬಳಿಕ ನವರೋಜಿಯವರ ರಾಜಕೀಯ ವ್ಯಾಸಂಗವು ಇನ್ನೂ ಮುಂದಕ್ಕೆ ಸಾಗಿತು. ಇಂಡಿಯದ ವಿಷಯ ವಾಗಿ ಅಲ್ಲಿ ಜನರಿಗಿದ್ದ ಅಜ್ಞಾನವನ್ನೂ ಮೌಢ್ಯವನ್ನೂ ಹೋಗ ಲಾಡಿಸಿ, ಭಾರತೀಯರಿಗೂ ಆಂಗ್ಲೇಯರಿಗೂ ಪರಸ್ಪರ ಸೌಹಾರ್ದ ವನ್ನು ಕಲ್ಪಿಸುವುದಕ್ಕಾಗಿ "ಲಂಡನ್-ಇಂಡಿಯನ್ ಸೊಸೈಟಿ" ಎಂಬ ಸಂಘವನ್ನು ಅವರು ಪ್ರತಿಷ್ಠಿಸಿದರು. ಸ್ವಲ್ಪ ಕಾಲದಮೇಲೆ ಅದೇ ಉದ್ದೇಶಗಳನ್ನೇ ಮತ್ತಷ್ಟು ಚೆನ್ನಾಗಿ ನೆರವೇರಿಸಲು "ಈಸ್ಟ್ ಇಂಡಿಯ ಅಸೋಸಿಯೇಷನ್" ಎಂಬ ದೊಡ್ಡ ಸಂಘವು ನಿರ್ಮಿತ ವಾಯಿತು. ಇದು ಈಗಲೂ ಜೀವಿಸಿದೆ. ತನ್ನ ಷಷ್ಟ್ಯಬ್ದಮಹೋ ತ್ಸವ ಕಾಲದಲ್ಲಿ ಆ ಸಂಘವು ತನ್ನ ಪ್ರತಿಷ್ಠಾಪಕರಾದ ನವರೋಜಿ ಯವರ ಉಪಕಾರವನ್ನು ಬಹುವಾಗಿ ಸ್ಮರಿಸಿತು. ಈ ಸಂಘಕ್ಕೆ ನವ ರೋಜಿಯವರು ಬರೋಡೆಯ ಮಹಾರಾಜರೇ ಮುಂತಾದ ದೇಶೀಯ ರಾಜರುಗಳ ಆಶ್ರಯವನ್ನೂ ಆಂಗ್ಲ ರಾಜಕೀಯ ಪ್ರಮುಖರ ಸ್ನೇಹವನ್ನೂ ಸಂಪಾದಿಸಿಕೊಟ್ಟು, ಅದರ ಮೂಲಕ ಭಾರತ ದೇಶದ ಸ್ಥಿತಿಗತಿಗಳನ್ನು ಕುರಿತ ಜ್ಞಾನವನ್ನು ಆಂಗ್ಲೇಯ ರಲ್ಲಿ ಹರಡಿಸುತ್ತಿದ್ದರು. ನವರೋಜಿಯವರೂ, ಉಮೇಶಚಂದ್ರ ಬ್ಯಾನರ್ಜಿಯವರೂ, ಸರ್ ಪಿ. ಮೇಥಾ ಅವರೂ, ಇತರ ಇಂಡಿಯಾ ದೇಶಾಭಿಮಾನಿಗಳೂ ಆ ಸಮಿತಿಯ ಪರವಾಗಿ ಅನೇಕ ಉಪನ್ಯಾಸ ಗಳನ್ನು ಕೊಟ್ಟು, ತಮ್ಮ ಜನರ ವಿದ್ಯಮಾನಗಳನ್ನೂ ಕೋರಿಕೆ ಗಳನ್ನೂ ಬ್ರಿಟಿಷ್ ಜನರಿಗೆ ವಿಶದಪಡಿಸಿದರು. ಅಷ್ಟುಮಾತ್ರವಲ್ಲದೆ, ನವರೋಜಿಯವರು ಇಂಗ್ಲೆಂಡಿನ ಮುಖ್ಯಪಟ್ಟಣಗಳಲ್ಲೆಲ್ಲಾ ಸಂಚ ರಿಸಿ, ಅಲ್ಲಿಯ ವರ್ತಮಾನ ಪತ್ರಿಕೆಗಳಲ್ಲಿ ಪದೇ ಪದೇ ತಮ್ಮ

ದೇಶದ ವಿಷಯಗಳನ್ನು ಪ್ರಚುರಗೊಳಿಸಿ, ಬ್ರಿಟಿಷರ ಗಮನವನ್ನಾಕರ್ಷಿಸಿದರು.

## ಮೈಸೂರಿನ ಸ್ನೇಹಿತರು

ಆ ಕಾಲದಲ್ಲಿ ಅವರು ಮಾಡಿದ ಒಂದು ಕಾರ್ಯವು ಮೈಸೂರಿನವರಿಗೆ ಎಂದೆಂದಿಗೂ ಜ್ಞಾಪಕದಲ್ಲಿರತಕ್ಕದ್ದಾಗಿದೆ. ಆಗ (೧೮೬೬) ನಮ್ಮ ಸಂಸ್ಥಾನವನ್ನು ಬ್ರಿಟಿಷರ ಆಳ್ವಿಕೆಯಿಂದ ದೇಶೀಯ ಪ್ರಭುತ್ವಕ್ಕೆ ವಾಪಸುಕೊಡಿಸುವ ಪ್ರಶ್ನೆ ಚರ್ಚೆಯಲ್ಲಿತ್ತು. ನವರೋಜಿಯವರು ಆ ಚರ್ಚೆಗೆ ಪ್ರವೇಶಿಸಿ, ಮೈಸೂರು ರಾಜರವರ ಪಕ್ಷವನ್ನು ಹಿಡಿದು ವಾದಿಸಿ, ಅವರಮೇಲಣ ಅಪವಾದಗಳನ್ನು ಹೋಗಲಾಡಿಸಿ, ನಮ್ಮ ಸಂಸ್ಥಾನದ ಜೀರ್ಣೋದ್ಧಾರಕ್ಕಾಗಿ ಪರಿಶ್ರಮಿಸಿದರು.

ಹಾಗೆ ಅವರು ನಮ್ಮ ಸಂಸ್ಥಾನದ ವಿಷಯದಲ್ಲಿ ತೋರಿದ ಸ್ನೇಹವು ಎಂದಿಗೂ ಕಡಮೆಯಾಗಲಿಲ್ಲ. ಅವರು ಮೈಸೂರಿನ ರಾಜ್ಯವಿಚಕ್ಷಣೆಯನ್ನು ಆಗಾಗ ಕೊಂಡಾಡಿ ಈ ಸಂಸ್ಥಾನಕ್ಕೆ ಗೌರವವನ್ನೂ, ಅದರ ಅಧಿಕಾರಿಗಳಿಗೆ ಪ್ರೋತ್ಸಾಹವನ್ನೂ ಕೊಟ್ಟು ತಮ್ಮ ವಿಶ್ವಾಸವನ್ನು ತೋರಿಸುತ್ತಿದ್ದರು. ಇದನ್ನು ಮನಸ್ಸಿನಲ್ಲಿಟ್ಟು ಕೊಂಡು ಹಿಂದಿನ ಶ್ರೀಮನ್ಮಹಾರಾಜರವರು ನವರೋಜಿಯವರ ಜ್ಞಾಪಕ ಚಿಹ್ನೆಯ ಪ್ರಯತ್ನಕ್ಕೆ ಕೃತಜ್ಞತೆಯಿಂದ ಧನಸಹಾಯವನ್ನು ಸಮರ್ಪಿಸಿದರು.

೧೮೬೮ರಲ್ಲಿ ನವರೋಜಿಯವರು "ಕಾಮಾ" ವರ್ತಕಸಂಘವನ್ನು ಬಿಟ್ಟು ಸ್ವಂತ ವ್ಯಾಪಾರವನ್ನಾರಂಭಿಸಿದ್ದರು. ಆದರೆ ೧೮೬೬ರಲ್ಲಿ ಒಬ್ಬ ಸ್ವದೇಶೀಯ ಮಿತ್ರನು ಕಷ್ಟಕ್ಕೆ ಸಿಕ್ಕಿರಲು, ಅವನನ್ನುಳಿಸುವ ಪ್ರಯತ್ನದಲ್ಲಿ ತಾವೇ ಕಷ್ಟಕ್ಕೊಳಗಾದರು. ಆದರೂ ನವರೋಜಿಯವರು ಧೈರ್ಯಗೆಡದೆ, ನಡೆದ ಸಂಗತಿಯನ್ನು ತಮಗೆ

ಸಾಲ ಕೊಟ್ಟಿದ್ದವರಲ್ಲಿ ಮರೆಮಾಚದೆ, ಋಣವನ್ನು ನ್ಯಾಯವಾದ ರೀತಿಯಲ್ಲಿ ತೀರಿಸಬೇಕೆಂಬ ತಮ್ಮ ದೃಢನಿಶ್ಚಯವನ್ನು ಅವರಿಗೆ ತಿಳಿಯಪಡಿಸಲು, ಅವರು ಆ ಪ್ರಾಮಾಣಿಕತೆಗೆ ಮೆಚ್ಚಿ, ನವರೋಜಿಯವರಿಗೆ ಬೇಕಾದ ಅನುಕೂಲ್ಯಗಳನ್ನು ಕೊಟ್ಟರು. ಹೀಗೆ ಸಹಾಯಮಾಡಿದವರಲ್ಲಿ "ಬ್ಯಾಂಕ್ ಆಫ್ ಇಂಗ್ಲೆಂಡ್" ಎಂಬ ಪ್ರಸಿದ್ಧ ಧನಶಣ್ಯದ ಮುಖ್ಯಾಧಿಕಾರಿ ಒಬ್ಬನು. ಆತನು ನವರೋಜಿಯವರ ಸತ್ಯಸಂಧತೆಯನ್ನು ಹೊಗಳಿ, ಅವರಿಗೆ ಪ್ರೋತ್ಸಾಹಸೂಚಕವಾದ ಕಾಗದವನ್ನು ಬರೆದನು.

## ಸ್ವದೇಶದಲ್ಲಿ

೧೮೬೯ರಲ್ಲಿ ನವರೋಜಿಯವರು ಸ್ವದೇಶಕ್ಕೆ ಹಿಂದಿರುಗಿದರು. ಆಗ ಅವರನ್ನು ಬೊಂಬಾಯಿ ಪುರಜನರು ಅತಿ ವಿಜೃಂಭಣೆಯಿಂದ ಬರಮಾಡಿಕೊಂಡು, ತಮ್ಮ ಕೃತಜ್ಞತಾಸೂಚಕವಾದ ಒಂದು ಥೈಲಿಯನ್ನು ನವರೋಜಿಯವರಿಗೆ ಒಪ್ಪಿಸಿದರು. ನವರೋಜಿಯವರು ಆ ದ್ರವ್ಯವನ್ನು ಸ್ವಂತಕ್ಕಿಟ್ಟುಕೊಳ್ಳದೆ, ದೇಶೋಪಕಾರಕವಾದ ಸಂಸ್ಥೆಗಳಿಗೆ ವಿನಿಯೋಗ ಮಾಡಿದರು.

ಏತನ್ಮಧ್ಯೆ ಅವರು ಇಂಗ್ಲೆಂಡಿನಲ್ಲಿ ಬಿತ್ತಿದ್ದ ಬೀಜವು ಅಂಕುರಿಸಲು ಮೊದಲಾಯಿತು. ಅವರು ವಾದಿಸುತ್ತಿದ್ದಂತೆ ಇಂಡಿಯಾದೇಶದ ಆದಾಯ ವ್ಯಯಗಳನ್ನು ಪರೀಕ್ಷಿಸುವ ಬಗೆಗೆ ಪಾರ್ಲಿಮೆಂಟು ಸಭೆಯವರು ಒಂದು "ಕಮಿಟಿ" (ಉಪಸಭೆ) ಯನ್ನು ನಿಯಮಿಸಿದರು. ಆ ಉಪಸಭೆಯ ಮುಂದೆ ನಮ್ಮ ದೇಶದ ವಿದ್ಯಮಾನಗಳನ್ನು ವಿವರಿಸಿ ಹೇಳಲು ನವರೋಜಿಯವರು ಪುನಃ ಇಂಗ್ಲೆಂಡಿಗೆ ತೆರಳಿದರು. ಇಂಡಿಯಾದೇಶದ ದಾರಿದ್ರ್ಯವು ಎಣೆಯಿಲ್ಲದ್ದೆಂದೂ, ಇಲ್ಲಿಯ ಸರಕಾರದ ಸಿಬ್ಬಂದಿಯ

ವೆಚ್ಚವು ಮಿತಿಮಿರಿದ್ದೆಂದೂ, ಕಂದಾಯ ತೆರುಗೆಗಳ ಭಾರವು ಜನರನ್ನು ಕುಗ್ಗಿಸುವಷ್ಟರದೆಂದೂ, ಅವರ ವರಮಾನವು ಸರಾಸರಿ ತಲೆಗೆ ವರ್ಷ ಒಂದಕ್ಕೆ ೨೦-೨೫ ರೂಪಾಯಿಗಿಂತ ಹೆಚ್ಚಿನದಲ್ಲ ವೆಂದೂ ಮುಂತಾಗಿ ದೃಷ್ಟಾಂತಗಳೊಡನೆ ತೋರಿಸಿಕೊಟ್ಟು, ಈ ದೇಶದ ರಾಜ್ಯಭಾರಕ್ರಮವು ಬುಡಮುಟ್ಟ ಬದಲಾವಣೆ ಹೊಂದ ಬೇಕೆಂದು ವಾದಿಸಿದರು. ಇದರಿಂದ ಈ ದೇಶದ ಉಪ್ಪು ತಿಂದು ಕೊಬ್ಬಿದ್ದ ಅನೇಕ ಮಂದಿ ಆಂಗ್ಲೇಯ ಅಧಿಕಾರಿಗಳಿಗೂ ಅವರ ಸ್ನೇಹಿತರಿಗೂ ಕೋಪಬಂದದ್ದು ಆಶ್ಚರ್ಯವೇನೂ ಅಲ್ಲ.

೧೮೭೪ ರಲ್ಲಿ ನವರೋಜಿಯವರು ಸ್ವದೇಶಕ್ಕೆ ಪುನಃ ಹಿಂದಿರುಗಿ ಬಂದು ಬರೋಡಾ ಸಂಸ್ಥಾನದ ದಿವಾನ್ ಪದವಿ ಯನ್ನಲಂಕರಿಸಿದರು. ಆಗ ಅಲ್ಲಿಯ ಆಡಳಿತಗಳು ತುಂಬಾ ಅಸಮ ರ್ಪಕವಾದ ಸ್ಥಿತಿಯಲ್ಲಿದ್ದವು. ಅದರಜೊತೆಗೆ ಅಲ್ಲಿಯ ಬ್ರಿಟಿಷ್ ರೆಸಿಡೆಂಟ್ ಸಾಹೇಬನು ಸ್ನೇಹಪರನಲ್ಲದೆಯೂ, ಅಲ್ಲಿಯ ಅಧಿ ಕಾರಿಗಳು ಲಂಚಕೋರರಾಗಿಯೂ ಇದ್ದರು. ನವರೋಜಿಯವರು ಈ ತೊಂದರೆಗಳನ್ನೆಲ್ಲ ಕ್ರಮೇಣ ನಿವಾರಣೆ ಮಾಡಿಕೊಂಡು, ಅಕ್ರಮಗಳನ್ನು ತಿದ್ದಿ, ಆಡಳಿತವನ್ನು ಉತ್ತಮ ಸ್ಥಿತಿಗೆ ತಂದರು. ಈ ರೀತಿ ಅವರು ಆ ಸಂಸ್ಥಾನಕ್ಕೆ ಮಾಡಿದ ಮಹೋಪಕಾರವನ್ನು ಅಂದಿನ ಗಾಯಕವಾಡಾ ಮಹಾರಾಜರವರು ಸ್ಮರಿಸಿ ನವರೋಜಿ ಯವರಿಗೆ ಒಂದು ಕೃತಜ್ಞತಾ ಬಹುಮಾನ ಸೂಚಕವಾದ ಮಾಸ ಸಂಭಾವನೆಯನ್ನು ಕೊಡುತ್ತಿದ್ದರು.

## ಕಾಂಗ್ರೆಸ್ ಸ್ಥಾಪನೆ

ಬರೋಡಾ ಸಂಸ್ಥಾನದ ಮಂತ್ರಿಪದವಿಯನ್ನು ಬಿಟ್ಟ ತರು ವಾಯ ನವರೋಜಿಯವರು ಬೊಂಬಾಯಿ ಪಟ್ಟಣಕ್ಕೆ ಹಿಂದಿರುಗಿ, ಅಲ್ಲಿಯ ಮ್ಯುನಿಸಿಪಲ್ ಅಥವಾ ಪೌರಪ್ರಮುಖ ಸಭೆಯ ಸದಸ್ಯ

ರಾಗಿ, ತಮ್ಮ ನಗರಾಭಿಮಾನಕ್ಕೆ ರೂಪ ಕೊಟ್ಟರು. ಇಂಡಿಯಾ ದೇಶದ ಪಟ್ಟಣಗಳಲ್ಲೆಲ್ಲಾ ಬೊಂಬಾಯಿ ಪಟ್ಟಣವು ಪ್ರಜಾನುಕೂಲ್ಯಗಳಿಗೂ, ಪೌರಕಾರ್ಯವಿಚಕ್ಷಣೆಗೂ, ಸೌಂದರ್ಯಕ್ಕೂ ಆದರ್ಶವೆನಿಸಿದೆ. ಇದಕ್ಕೆ ಕಾರಣವಾಗಿರುವ ಅಲ್ಲಿಯ ಪುರಪ್ರಮುಖರ ಕರ್ತವ್ಯನಿಷ್ಠೆಗೆ ಮಾರ್ಗದರ್ಶಕರಾದವರಲ್ಲಿ ಮೊದಲನೆಯವರು ದಾದಾಭಾಯಿಯವರು. ಅವರ ಪುರಸೇವಾ ನಿರತತೆಯನ್ನು ಮೆಚ್ಚಿ, ಬೊಂಬಾಯಿ ಗವರ್ನರಾದ ಲಾರ್ಡ್ ರೀ ಯವರು ೧೮೮೬ ರಲ್ಲಿ ಅವರನ್ನು ಲೆಜಿಸ್ಲೆಟಿವ್ (ಶಾಸನಕರ್ತ) ಸಭೆಗೆ ಸದಸ್ಯರನ್ನಾಗಿ ಬರಮಾಡಿಕೊಂಡರು. ದಾದಾಭಾಯಿಯವರು ಆ ಸಭೆಯಲ್ಲಿ ಬಹುದಿನಗಳಿರಲಿಲ್ಲ. ಏಕೆಂದರೆ ಅವರು ಸ್ವದೇಶಸೇವೆಯನ್ನು ಆ ಕಾಲದಲ್ಲಿ ನಮಗೆ ರಾಜದೇಶವಾಗಿದ್ದ ಇಂಗ್ಲೆಂಡಿನಲ್ಲಿ ಮಾಡುವುದು ಆವಶ್ಯಕವೆಂದು ತೀರ್ಮಾನಿಸಿ ಅಲ್ಲಿಗೆ ಪುನಃ ಪ್ರಯಾಣ ಬೆಳಸಿದರು.

ಇಂಗ್ಲೆಂಡಿಗೆ ಹೊರಡುವುದಕ್ಕೆ ಮುಂಚೆ ಅವರು ಮಾಡಿದ ಒಂದು ಕಾರ್ಯವು ಚರಿತ್ರಾರ್ಹವಾಗಿದೆ. ಅದಾವುದೆಂದರೆ "ಇಂಡಿಯನ್ ನ್ಯಾಷನಲ್ ಕಾಂಗ್ರೆಸ್" ಎಂಬ ಭಾರತ ರಾಷ್ಟ್ರ ಮಹಾಸಭೆಯ ಸಂಸ್ಥಾಪನೆ. ಆ ಮಹಾಕಾರ್ಯದಲ್ಲಿ ಆಗ ಅವರೊಡನೆ ಸೇರಿದ್ದವರ ಪೈಕಿ, ಬೊಂಬಾಯಿ ಹೈಕೋರ್ಟಿನ ಜಡ್ಜಿ ಮಹಾದೇವ ಗೋವಿಂದರ್‍ಯಾನಡೆಯವರು, ಮದ್ರಾಸ್ ಹೈಕೋರ್ಟಿನ ಜಡ್ಜಿಯೂ, ಯೂನಿವರ್ಸಿಟಿಯ ವೈಸ್‌ಛಾನ್ಸಲರೂ ಆಗಿದ್ದ ಸರ್.) ಎಸ್. ಸುಬ್ರಹ್ಮಣ್ಯ ಅಯ್ಯರ್ (ಕೆ. ಸಿ. ಐ. ಇ.) ಎಲ್‌ಎಲ್. ಡಿ. ಅವರು, ಬಂಗಾಳದ ಪ್ರಖ್ಯಾತ ವಾಗ್ವಿಚಕ್ಷಣರಾದ ಸುರೇಂದ್ರನಾಥ ಬಾನರ್ಜಿಯವರು-ಮುಂತಾದ ವಿದ್ವಜ್ಜನರೂ ವ್ಯವಹಾರಕುಶಲರೂ ಇದ್ದರು. ಈ ಮಹನೀಯರೊಡಗೂಡಿ ೧೮೮೫ ರ

ರಲ್ಲಿ ದಾದಾಭಾಯಿ ನವರೋಜಿಯವರು ನೆಟ್ಟಬೀಜವೇ ಕಾಲ
ಕ್ರಮದಲ್ಲಿ ಮಹಾವೃಕ್ಷವಾಗಿ ಬೆಳೆದು, ಶಾಖೋಪ ಶಾಖೆಗಳನ್ನು
ನಾನಾ ದಿಕ್ಕುಗಳಲ್ಲಿಯೂ ಹರಡಿ, ಪುಷ್ಪಪಲ್ಲವಗಳಿಂದೊಡಗೂಡಿ
ಭಾರತೀಯರ ಯೋಗ್ಯಜೀವನಕ್ಕೆ ಬೇಕಾದ "ಸ್ವರಾಜ್ಯ"ವೆಂಬ
ಫಲವನ್ನು ಕೊಟ್ಟಿತು.

## ಪಾರ್ಲಿಮೆಂಟು ಮೆಂಬರು

ಇಂಡಿಯಾ ಸರಕಾರವು ಆಗ ವೈಸ್‌ರಾಯ್ ಮುಂತಾದ
ಅಧಿಕಾರಿಗಳಿಂದಲೂ, ಅವರಿಗೆ ಮೇಲ್ಪಟ್ಟ ಬ್ರಿಟಿಷ್ ಮಂತ್ರಿ
ಮಂಡಲದಿಂದಲೂ ನಡೆಯಿಸಲ್ಪಡುತ್ತಿದ್ದರೂ, ಅವರೆಲ್ಲರಿಗಿಂತ
ಮೇಲಣ ಅಧಿಕಾರವು ಬ್ರಿಟಿಷ್ ಪಾರ್ಲಿಮೆಂಟಿಗೆ ಸೇರಿದ್ದದ್ದಾದ
ಕಾರಣದಿಂದಲೂ, ಆ ಸಭೆಯು ಬ್ರಿಟಿಷ್ ಪ್ರಜಾಸಮುದಾಯದ
ಪ್ರತಿನಿಧಿಯಾದದ್ದಾದಕಾರಣದಿಂದಲೂ, ಆ ಸಭೆಯಲ್ಲೊಂದು
ಸ್ಥಾನವನ್ನು ತಾವು ಸಂಪಾದಿಸಿದರೆ ಆದು ಇಂಡಿಯಾದೇಶದ
ಸೇವೆಗೆ ಅತ್ಯುತ್ತಮ ಸಾಧಕವಾಗುವುದೆಂದು ನವರೋಜಿಯವರಿಗೆ
ತೋರಿಬಂದಿತ್ತು. ಅದರಂತೆ ಅವರು ೧೮೮೬ರಲ್ಲಿ ಇಂಗ್ಲೆಂಡಿನ
ಹೋಲ್ಬರ್ನ್ ಜಿಲ್ಲೆಯ ಪ್ರತಿನಿಧಿಯಾಗಿ ಪಾರ್ಲಿಮೆಂಟಿಗೆ ಚುನಾಯಿ
ಸಲ್ಪಡಲು ಉಮೇದುವಾರರಾಗಿ ನಿಂತರು. ಆದರೆ ಅವರಿಗೆ
ಎರಡು ಕಾರಣಗಳಿಂದ ಆಸಾರಿ ಜಯವಾಗದೆ ಹೋಯಿತು
(೧) ಅವರು ಕರಿಯಬಣ್ಣದ ಜಾತಿಯವರು, ಎಂದರೆ "ರಾಜ
ಕೀಯಪದವಿಗೆ ಅನರ್ಹರೆಂದೆಣಿಸಲ್ಪಟ್ಟಿದ್ದ ಇಂಡಿಯಾ
ದೇಶೀಯರು"; (೨) ಅವರು "ಲಿಬರಲ್" ಅಥವಾ ಸ್ವಾತಂತ್ರ್ಯ
ವಾದಿ ಪಕ್ಷದವರು; ಎಂದರೆ ಬಹುಮಂದಿ ಇಂಗ್ಲಿಷ್ ಜನರ
ಇಷ್ಟಕ್ಕೆ ವಿರೋಧವಾಗಿ ಐರ್ಲೆಂಡಿಗೆ ಸ್ವರಾಜ್ಯಕೊಡಬೇಕೆಂದ

ಪಾದಿಸುತ್ತಿದ್ದ ಕಕ್ಷಿಯವರು. ಹೀಗಿದ್ದರೂ ನವರೋಜಿಯವರಿಗೆ ...೫೦ ಮಂದಿಯ (ವೋಟು) ಅಭಿಮತಗಳು ದೊರೆತಿದ್ದುವು. ಅದು ಆಗ ಸದ್ಯಃಫಲಕಾರಿಯಾಗದಿದ್ದರೂ, ಅವರು ಎದೆಗುಂದದೆ, ಸ್ವದೇಶಸೇವೆಯ ಕಾರ್ಯಗಳನ್ನು ಅವಿಚ್ಛಿನ್ನವಾಗಿ ನಡಸುತ್ತ, ಬ್ರಿಟಿಷ್ ಜನರಿಗೆ ಅವರ ಜವಾಬ್ದಾರಿಗಳನ್ನು ತಿಳಿಸುತ್ತ, ಅವರ ವಿಶ್ವಾಸಗೌರವಗಳಿಗೆ ಪಾತ್ರರಾಗುತ್ತ ಬಂದರು. ಕೊನೆಗೆ ೧೮೯೨ ರಲ್ಲಿ ಸೆಂಟ್ರಲ್ ಫಿನ್ಸ್‌ಬರಿ ಜಿಲ್ಲೆಯ ಪ್ರಜೆಗಳು ನಮ್ಮ ದಾದಾ ಭಾಯಿ ನವರೋಜಿಯವರನ್ನು ತಮ್ಮ ಪ್ರತಿನಿಧಿಯಾಗಿ ಚುನಾಯಿಸಿದರು. ಬ್ರಿಟಿಷ್ ಪಾರ್ಲಿಮೆಂಟು ಸಭೆಯೊಳಕ್ಕೆ ಇಂಡಿಯಾ ದೇಶೀಯರು ಸದಸ್ಯರಾಗಿ ಪ್ರವೇಶಿಸಲು ಅದೇ ಮೊದಲು. ಆದ ಕಾರಣದಿಂದ ಭಾರತೀಯರಿಗೆ ಅತಿಶಯವಾದ ಸಂತೋಷವೂ ಹುಮ್ಮಸ್ಸೂ ಉಂಟಾದವು. ೧೮೯೨ನೆಯ ಇಸವಿ ಆಗಸ್ಟು ತಾ॥ ೯ನೆಯ ದಿನ ನವರೋಜಿಯವರು ಬ್ರಿಟಿಷ್ ಚಕ್ರಾಧಿಪತ್ಯದ ಸರ್ವಾಧಿಕಾರಿಯಾದ ಪಾರ್ಲಿಮೆಂಟು ಸಭೆಯೊಳಕ್ಕೆ ಪ್ರಥಮ ಪ್ರವೇಶ ಮಾಡಿದ ಸಂದರ್ಭದಲ್ಲಿ, ಇಂಡಿಯಾ ದೇಶದ ಕೃತಜ್ಞತೆಯನ್ನೂ, ಇಂಡಿಯದ ವಿಷಯದಲ್ಲಿ ಬ್ರಿಟಿಷರು ಅನುಸರಿಸಬೇಕಾದ ನೀತಿಯನ್ನೂ, ಮತ್ತು ಧರ್ಮಸ್ವಾತಂತ್ರ್ಯಗಳೇ ಬ್ರಿಟಿಷ್ ಚಕ್ರಾಧಿಪತ್ಯಕ್ಕೆ ಮೂಲಾಧಾರಗಳೆಂಬ ತತ್ತ್ವವನ್ನೂ ಸಕಲ ಜನ ಸಮ್ಮತವಾದ ರೀತಿಯಲ್ಲಿ ವಿವರಿಸಿ ಸಾರಿದರು.

ಇಂಡಿಯಾದೇಶದಲ್ಲಿ ಕಾಂಗ್ರೆಸ್ ಅಥವಾ ರಾಷ್ಟ್ರೀಯ ಮಹಾಸಭೆಯು ವರ್ಷೇ ವರ್ಷೇ ಪ್ರವರ್ಧಮಾನವಾಗುತಲಿತ್ತು. ೧೮೮೬ರಲ್ಲಿ ನವರೋಜಿಯವರು ಆ ಸಭೆಯ ದ್ವಿತೀಯ ಸಮ್ಮೇಲನದ ಅಗ್ರಾಸನವನ್ನು ವಹಿಸಲು ಕಲ್ಕತ್ತೆಗೆ ಬಂದಿದ್ದು, ಈ ದೇಶದ ದುಃಖ ದಾರಿದ್ರ್ಯಗಳನ್ನು ಕುರಿತು ಧೈರ್ಯದಿಂದ

ಉಪನ್ಯಸಿಸಿದ್ದರು. ೧೮೯೩ರಲ್ಲಿ ಪುನಃ ಅದೇ ಸನ್ಮಾನವನ್ನು ಪಡೆಯಲು ಅವರು ಪ್ರಾರ್ಥಿತರಾಗಿ, ಈ ಸೀಮೆಗೆ ಬರಬೇಕಾಯಿತು. ಆಗ ಬೊಂಬಾಯಿ ಪಟ್ಟಣದಲ್ಲಿ ಜಹಜಿನಿಂದಿಳಿದು ಲಾಹೋರ್ ಪಟ್ಟಣವನ್ನು ಸೇರುವವರೆಗೂ ಊರೂರಿನಲ್ಲಿಯೂ ಜನರು ಅವರಿಗೆ ತೋರಿದ ಆದರಣೆಯೂ ಮರ್ಯಾದೆಯೂ ರಾಜಾಧಿರಾಜರುಗಳಿಗೂ ಅಸೂಯೆಯನ್ನುಂಟುಮಾಡಬಲ್ಲಂಥವಾಗಿದ್ದುವು. ಆಸಾರಿಯ ಸಮ್ಮೇಳನದಲ್ಲಿ ಅವರು ಎಂದಿನಂತೆ ಹಿಂದುಸ್ಥಾನದ ವಿವಿಧ ಕಷ್ಟನಷ್ಟಗಳನ್ನು ಕುರಿತು ಪ್ರಸ್ತಾವಿಸಿದ್ದಲ್ಲದೆ, ಭಾರತೀಯರು ತಮ್ಮ ರಾಜಕೀಯ ಸ್ವಾತಂತ್ರ್ಯ ಸಂಪಾದನೆಗಾಗಿ ಜಾತಿಮತಭೇದಗಳನ್ನು ಗಣಿಸದೆ ಏಕೀಭವಿಸಿ, ತಮ್ಮ ಜನಪದಭಾವವನ್ನು ಬಲಪಡಿಸಿಕೊಳ್ಳಬೇಕೆಂದೂ, ಇಂಗ್ಲೆಂಡ್ ದೇಶವು ಭಾರತೀಯರನ್ನು ತನ್ನ ಸ್ವಂತಪ್ರಜೆಗೆ ಸಮನೆಂದು ತಿಳಿದು ಅವರಿಗೂ ತನ್ನ ಪಾರ್ಲಿಮೆಂಟಿನಲ್ಲಿ ಸ್ಥಳಕೊಡಬೇಕೆಂದೂ ಸೂಚಿಸಿದರು.

## ‘ಇಂಡಿಯ’ ಪತ್ರಿಕೆ

ಇಂಗ್ಲೆಂಡಿನಲ್ಲಿ ಅವರು ಕೆಯಿನ್, ಹ್ಯೂಮ್, ಸರ್ ವಿಲಿಯಮ್‌ವೆಡ್ಡರ್‌ಬರ್ನ್, ಸರ್ ಹೆನ್ರಿ ಕಾಟನ್—ಮುಂತಾದ ಸ್ನೇಹಿತರ ಸಹಾಯವನ್ನು ಪಡೆದು, ಇಂಡಿಯಾ ದೇಶದ ವಿಷಯಗಳ ಪರಿಶೀಲನೆಗಾಗಿ “ಇಂಡಿಯನ್ ಪಾರ್ಲಿಮೆಂಟರೀ ಕಮಿಟಿ” ಎಂಬ ಒಂದು ಸಮಿತಿಯನ್ನೇರ್ಪಡಿಸಿ, ಆ ಮೂಲಕ ತಮ್ಮ ದೇಶದ ವಿದ್ಯಮಾನಗಳು ಪಾರ್ಲಿಮೆಂಟಿನಲ್ಲಿ ಚೆನ್ನಾಗಿ ಚರ್ಚೆಯಾಗುವಂತೆ ಮಾಡಿದರು. ಅದರಿಂದ ಅನೇಕ ಒಳ್ಳೆಯ ತೀರ್ಮಾನಗಳಾದವು. ಅವುಗಳಲ್ಲಿ ಮುಖ್ಯವಾದ ಒಂದಾವುದೆಂದರೆ:

-ಇಂಡಿಯಾ ದೇಶದ ರಾಜ್ಯಾಧಿಕಾರಗಳಿಗೆ ಜನರನ್ನು ಚುನಾಯಿಸುವ ಪರೀಕ್ಷೆಯು, ಇಂಗ್ಲೆಂಡೊಂದರಲ್ಲಿಯೇ ನಡೆಯುವುದಕ್ಕೆ ಬದಲಾಗಿ, ಇಂಗ್ಲೆಂಡ್ ಇಂಡಿಯಾ ದೇಶಗಳೆರಡರಲ್ಲಿಯೂ ಏಕಕಾಲದಲ್ಲಿಯೇ ನಡೆಯಬೇಕೆಂಬುದು. (ಇದನ್ನು ಆಗಣ ಬ್ರಿಟಿಷ್ ಸರಕಾರ ನಡಸಲಿಲ್ಲ).

೧೮೯೭ರಲ್ಲಿ ಇಂಡಿಯದ ಆದಾಯವ್ಯಯಕ್ರಮಗಳ ಪರೀಕ್ಷೆಗಾಗಿ ಏರ್ಪಟ್ಟಿದ್ದ ವೆಲ್ಬೀಕಮಿಷನ್ ಎಂಬ ಸಮಿತಿಯ ಮುಂದೆಯೂ, ೧೮೯೮ರಲ್ಲಿ ಈ ದೇಶದ ನಾಣ್ಯಟಂಕಸಾಲೆಗಳ ವಿಚಾರಕ್ಕಾಗಿ ಏರ್ಪಟ್ಟಿದ್ದ ಫೌಲರ್ ಕಮಿಟಿ ಎಂಬ ಉಪಸಭೆಯ ಮುಂದೆಯೂ ಆ ವಿಷಯಗಳಲ್ಲಿ ಅಭಿಪ್ರಾಯವನ್ನು ಹೇಳಲು ನವರೋಜಿಯವರನ್ನು ಕರೆದರು. ಆಗ ಅವರು ಈ ದೇಶದ ರಾಜ್ಯಭಾರಕ್ರಮದ ದುಂದುವೆಚ್ಚಗಳನ್ನೂ, ವಿದೇಶೀಯರು ಪಡೆಯುತ್ತಿದ್ದ ಅತಿವೇತನ ಅನುಚಿತ ಲಾಭಗಳನ್ನೂ, ಸ್ವದೇಶೀಯರನ್ನೇ ದೊಡ್ಡ ಅಧಿಕಾರಗಳಿಗೆ ನಿಯಮಿಸಿದರೆ ಆಗುವ ಮಿತವ್ಯಯ ಕಾರ್ಯವಿಚಕ್ಷಣೆಗಳನ್ನೂ ನಿದರ್ಶನಪೂರ್ವಕವಾಗಿ ತೋರಿಸಿದರು; ಮತ್ತು ಈ ದೇಶದ ಟಂಕಸಾಲೆಗಳನ್ನು ಮುಚ್ಚುವುದರಿಂದ ಇಲ್ಲಿಯವರಿಗೆ ನಷ್ಟವಾಗುವುದೆಂಬಂಶವನ್ನೂ ವ್ಯಕ್ತಪಡಿಸಿದರು.

ಆ ಕಾಲದಲ್ಲಿ ಬ್ರಿಟಿಷ್ ಜನರಿಗೆ ಇಂಡಿಯದ ಪರಿಸ್ಥಿತಿಯನ್ನೂ ಜನಮನೋಗತವನ್ನೂ ಕುರಿತು ತಿಳಿವಳಿಕೆ ಕೊಡಲು "ಇಂಡಿಯ" ಎಂಬ ಹೆಸರಿನ ಒಂದು ಇಂಗ್ಲಿಷ್ ವಾರಪತ್ರಿಕೆಯನ್ನು ಲಂಡನ್ ಪಟ್ಟಣದಿಂದ ಪ್ರಕಟಪಡಿಸಲು ದಾದಾಭಾಯಿಯವರೂ ಅವರ ಬ್ರಿಟಿಷ್ ಮಿತ್ರರೂ ಏರ್ಪಾಟು ಮಾಡಿದ್ದರು. ಆ "ಇಂಡಿಯ" ಪತ್ರಿಕೆ ಕಾರ್ಯಕಾರಿಯಾಗುವ ರೀತಿಯಲ್ಲಿ ಬಹು ವರ್ಷ ನಡೆಯಿತು. ಆದಕ್ಕಾಗಿ ತಗುಲಿದ ವೆಚ್ಚದಲ್ಲಿ

ನವರೋಜಿಯವರು ಉದಾರವಾಗಿ ಭಾಗ ವಹಿಸಿದ್ದುದು ಮಾತ್ರವೇ ಅಲ್ಲದೆ, ಅದಕ್ಕಾಗಿ ಲೇಖನಗಳನ್ನೊದಗಿಸಿಯೂ ಸಹಾಯ ಮಾಡಿದರು. ಇಂಡಿಯದ ಲಾಭ ನಷ್ಟಗಳ, ಇಷ್ಟಾನಿಷ್ಟಗಳ, ವಿಚಾರಗಳೆಲ್ಲ ಆ ಪತ್ರಿಕೆಯಲ್ಲಿ ಚರ್ಚಾ ಪ್ರಸಂಗ ರೂಪದಲ್ಲಿ ನಿರೂಪಿತವಾಗಿವೆ. ಆ ಪತ್ರವ್ಯವಹಾರದಲ್ಲಿ ದಾದಾಭಾಯಿಯವರ ಪಾಲು ಬಹು ದೊಡ್ಡದು.

## ಚಿನ್ನದ ಗಣಿ

ದೇಶದ ರಾಜಕೀಯೋದ್ಧಾರದ ವಿಚಾರಕ್ಕೆ ಹೇಗೋ ಅದರ ಸಂಪದಭಿವೃದ್ಧಿಯ ವಿಚಾರಕ್ಕೂ ಹಾಗೆಯೇ ನವರೋಜಿಯವರು ಗಮನ ಕೊಟ್ಟಿದ್ದರು. ಇದಕ್ಕೆ ಎರಡು ದೃಷ್ಟಾಂತಗಳನ್ನು ಇಲ್ಲಿ ಕೊಡಬಹುದಾಗಿದೆ. ಮೈಸೂರಿನ ದಿವಾನರಾಗಿದ್ದ ರಾಜ್ಯಧುರಂಧರ ಸರ್ ಕೆ. ಶೇಷಾದ್ರಿ ಅಯ್ಯರ್ ಅವರಿಗೆ ನವರೋಜಿಯವರು ೧೯೦೦ನೆಯ ಇಸ್ವಿ ಡಿಸೆಂಬರ್ ೨೦ರಲ್ಲಿ ಮೈಸೂರಿನ ಚಿನ್ನದ ಗಣಿಗಳ ಆಡಳಿತದ ಏರ್ಪಾಟನ್ನು ಕುರಿತು ಒಂದು ಕಾಗದ ಬರೆದರು. ಅದರ ಸಾರಾಂಶ ಹೀಗಿದೆ:—

"ಈಗ ಕೆಲವು ದಿವಸಗಳಿಂದ ನಾನು 'ಮೈಸೂರು ಸ್ಟ್ಯಾಂಡರ್ಡ್' ಪತ್ರಿಕೆಯನ್ನೋದಿ ಮನಸ್ಸಿನಲ್ಲಿ ವ್ಯಾಕುಲ ಪಡುತ್ತಿದ್ದೇನೆ.........ಆದರೂ ನಿಮಗೆ ತೊಂದರೆ ಕೊಡಲು ಇಚ್ಛೆ ಪಡಲಿಲ್ಲ. ಈಗ ನಾನು ಈ ಪತ್ರವನ್ನು ಬರೆಯುವಂತೆ ಮಾಡಿರುವುದು 'ಹಿಂದೂ' ಪತ್ರಿಕೆಯಲ್ಲಿ ಪ್ರಕಟವಾಗಿರುವ ಒಂದು ಲೇಖನ. ಅದರಲ್ಲಿ, ಒಂದು ದೇಶೀಯ ರಾಜ್ಯಕ್ಕೆ ನೈಜವಾಗಿರಬೇಕಾದ ಕಾರ್ಯ ನೀತಿಯ ಒಳತತ್ತ್ವವನ್ನೇ ಮೈಸೂರು ಸರಕಾರವು ಕೈಬಿಟ್ಟಿರುವಂತೆ ಒಂದು ಲೇಖನವನ್ನು ಓದಿ, ನನಗೆ ವಿಷಾದವಾಗಿದೆ. ಆ ತತ್ತ್ವವೇನೆಂದರೆ—ಪ್ರತಿಯೊಂದು ದೇಶೀಯ ರಾಜ್ಯವೂ

ಬುಡದಿಂದ ತುದಿಯುವರೆಗೂ ದೇಶೀಯರಿಂದಲೇ ಸ್ವತಃ ಆಳಲ್ಪಡ ಬೇಕೆಂಬುದು. ಬ್ರಿಟಿಷ್ ಸರಕಾರವೂ ಕೂಡ ಈ ತತ್ತ್ವವನ್ನು ಒಪ್ಪಿಕೊಂಡಿದೆ. ಹಿಂದಿನ ಮಹಾರಾಜರವರು (ಶ್ರೀ ಚಾಮ ರಾಜೇಂದ್ರ ಒಡೆಯರವರು) ಮೈನರ್ (ಅಪ್ರಬುದ್ಧ) ಆಗಿದ್ದ ಕಾಲದಲ್ಲಿ, ಇಂಡಿಯಾ ಸರಕಾರವು ಮೈಸೂರು ಸರಕಾರದಲ್ಲಿದ್ದ ವಿದೇಶೀ ಜನರನ್ನು ಕೂಡಿದ ಮಟ್ಟಿಗೂ ಕಡಮೆ ಮಾಡಲು ವಿಶೇಷವಾಗಿ ಪ್ರಯತ್ನಿಸಿತು. ಅದರ ಉದ್ದೇಶವೇನೆಂದರೆ— ಮಹಾರಾಜರು ಸಿಂಹಾಸನಕ್ಕೆ ಬರುವ ವೇಳೆಗೆ ಅವರು ಸಾಧ್ಯ ವಾದಷ್ಟುಮಟ್ಟಿಗೂ ಸ್ವದೇಶೀಯ ಆಡಳಿತಗಾರರ ಮೂಲಕವೇ ಆಳುವಂತಾಗಬೇಕೆಂಬುದು............

"ಮೈಸೂರಿನಲ್ಲಿ ಯೂರೋಪಿಯನ್ ಜನರನ್ನು ಉದ್ಯೋ ಗಕ್ಕೆ ನಿಯಮಿಸಿಕೊಳ್ಳುವುದರಿಂದ ಮೂರು ಬಗೆಯ ಕೇಡು: (೧) ಮೈಸೂರು ಸಂಸ್ಥಾನವು ಆಗ ಬ್ರಿಟಿಷ್ ಇಂಡಿಯದಂತೆಯೇ ಸಂಪದ್ವಿಷಯದಲ್ಲಿ ರಕ್ತ ಹೀರಲ್ಪಟ್ಟದ್ದಾಗುತ್ತದೆ. (೨) ಇಂಡಿ ಯದ ಸ್ವದೇಶೀಯರು ರಾಜ್ಯಭಾರ ನಡಸಲು ಅಸಮರ್ಥರೆಂದೂ, ಯೂರೋಪಿಯನರಿಲ್ಲದೆ ಅವರ ಪಾಡು ಸಾಗದೆಂದೂ ಆಗ ಸಿದ್ಧಾಂತ ಮಾಡಿದಂತಾಗುತ್ತದೆ. ಭಾರತೀಯರ ಮೇಲೆ ಬೀಳಲು ಇದಕ್ಕಿಂತಲೂ ಕಠಿನವಾದ ಪೆಟ್ಟು ಯಾವುದೂ ಇರಲಾರದು. (೩) ಈಗ ಮೂವತ್ತು ವರ್ಷಗಳಿಂದ ಮೈಸೂರಿನ ಪುನರುಜ್ಜೀವ ನಕ್ಕೆ ಏಕಪ್ರಕಾರವಾಗಿ ಪ್ರತಿಭಟನೆ ನಡಸಿರುವ ಆ್ಯಂಗ್ಲೋ-ಇಂಡಿ ಯನ್ ಜನರು ಅಂಥಾ ಏರ್ಪಾಟಿನಿಂದ ಸಂತೋಷ ಪಡುತ್ತಾರೆ. ಮೈಸೂರನ್ನೂ ಇತರ ದೇಶೀಯ ಸಂಸ್ಥಾನಗಳನ್ನೂ ಬ್ರಿಟಿಷ್ ಸರಕಾರವೇ ಸಾಕ್ಷಾತ್ತಾಗಿ ಆಳುವುದು ಯುಕ್ತವೆಂದು ಅವರು ಇನ್ನೂ ಸಾರಿಕೊಂಡು ಹೋಗಲು ನೀವೇ ಅವಕಾಶ ಮಾಡಿ ಕೊಟ್ಟಂತಾಗುತ್ತದೆ.

"ಇನ್ನು ಮೈಸೂರಿನ ಚಿನ್ನದ ಗಣಿಗಳ ಮತ್ತು ಇತ
ಖನಿಜ ಸಂಪತ್ತಿನ ವಿಚಾರ: ಮೈಸೂರಿನ ಸರಕಾರವಾಗ
ಅಥವಾ ಮೈಸೂರಿನ ಪ್ರಜೆಗಳಾಗಲಿ, ಪ್ರಕೃತಿ ತಮಗೆ ಕೊಟ್ಟಿರು
ಸಂಪತ್ತನ್ನು ತಾವೇ ರೂಢಿಸಿ ತಮ್ಮ ಸ್ವಂತಕ್ಕೆ ಉಳಿಸಿಕೊಂ
ರೆಂದು ನಾನು ಹಾರೈಸುತ್ತೇನೆ. ವಿದೇಶೀಯರು ಅದನ್ನು ಹೊ
ಕೊಂಡು ಹೋಗುವಂತೆ ಬಿಟ್ಟರೆ ರಾಜ್ಯಕ್ಕೆ ಉಳಿಯುವು
ಒಂದಿಷ್ಟು ಕೊಂಚವಾದ ಮೇಲುವರಿ ಹಣ (ರಾಯಲ್ಟಿ) ಮತ್
ಅದರ ಜನರಿಗೆ ಕೂಲಿಪಾಡು—ಇಷ್ಟೇ. ಮೈಸೂರು ರಾಜ್ಯವು ತನ
ಸ್ವಂತ ಪ್ರಜೆಯನ್ನೇ ತನ್ನ ಎಲ್ಲ ಬಗೆಯ ಆಡಳಿತಗಳಿಗೂ ಸಮರ್ಥ
ರಾಗುವಂತೆ ತಯಾರು ಮಾಡಲು ತನ್ನ ನರನರದಿಂದಲ
ಪ್ರಯತ್ನ ಪಡಬೇಕೆಂದು ನಾನು ಹೇಳತಕ್ಕವನು."

## ಕಬ್ಬಿಣದ ಗಣಿ

ಮೈಸೂರಿನ ಚಿನ್ನವನ್ನು ದೇಶಕ್ಕೆ ಉಳಿಸಿಕೊಳ್ಳುವ ಬ
ಶೇಷಾದ್ರಿ ಅಯ್ಯರವರಿಗೆ ಬರೆದಂತೆ, ಕಬ್ಬಿಣವನ್ನು ದೇಶ
ಸಂಪಾದಿಸಿಕೊಳ್ಳುವ ಬಗ್ಗೆ ನವರೋಜಿಯವರು ತಮ್ಮ ಸ್ವಮಿತ್ರ
ರಾದ ಜ್ಯಾಮ್‌ಷೆದ್‌ಜಿ ತಾತಾ ಅವರೊಡನೆ ಪತ್ರವ್ಯವಹಾರ ಬೆಳ
ದರು. ತಾತಾ ಅವರು ಈಗ ಬಿಹಾರ್ ಪ್ರಾಂತದಲ್ಲಿ ಜೆಮ್‌ಷೆದ್‌ಪು
ಎಂಬಲ್ಲಿರುವ ಪ್ರಸಿದ್ಧವಾದ ಕಬ್ಬಿಣದ ಕಾರಖಾನೆಯನ್ನು ಸ್ಥಾಪಿ
ದವರು. ಬೆಂಗಳೂರಿನಲ್ಲಿರುವ "ಇಂಡಿಯನ್ ಇನ್‌ಸ್ಟಿಟ್ಯೂಟ
ಆಫ್ ಸಯನ್ಸ್" ಎಂಬ ವಿಜ್ಞಾನ ವ್ಯಾಸಂಗ ಶಾಲೆಯನ
ಸ್ಥಾಪಿಸಿದವರೂ ಅವರೇ. ಇಂಡಿಯಾ ದೇಶದ ಸಂಪದಭಿವೃ
ಗಾಗಿ ನಾನಾ ಮುಖವಾಗಿ ಪರಿಶ್ರಮ ಮಾಡಿರುವವರಲ್ಲಿ ತಾತ
ಅವರು ನಿಜವಾಗಿಯೂ ಅಗ್ರಗಣ್ಯರು. ಅವರ ಮಹೋದ್ಯವ

ಇಲ್ಲದ ಯಂತ್ರ ಪಾರಿಶ್ರಾಮಿಕ ಕ್ಷೇತ್ರವೂ ವಾಣಿಜ್ಯ ಕ್ಷೇತ್ರವೂ ಇಂಡಿಯದಲ್ಲಿ ಯಾವುದೂ ಇಲ್ಲವೆಂದು ಹೇಳುವುದು ಅತಿಶಯೋಕ್ತಿಯಲ್ಲ. ಆ ಟಾಟಾ ಅವರು ೧೯೦೨ ರ ಸುಮಾರಿನಲ್ಲಿ ಕಬ್ಬಿಣದ ಗಣಿಯ ಪ್ರಯತ್ನವನ್ನು ಯೋಚಿಸಿ ಅದಕ್ಕಾಗಿ ಬಂಡವಾಳ ಹುಡುಕುತ್ತಿದ್ದರು. ಅಷ್ಟು ಹೆಚ್ಚಿನ ಹಣ ಈ ದೇಶದಲ್ಲಿ ದೊರೆಯುವುದು ಕಷ್ಟವೆಂದೂ ಅದನ್ನು ಪರದೇಶಗಳಿಂದ ಒದಗಿಸಿಕೊಳ್ಳಬೇಕೆಂದೂ ಅವರು ಚಿಂತಿಸುತ್ತಿದ್ದರು. ಆಗ ದಾದಾಭಾಯಿ ನವರೋಜಿಯವರು ಅವರಿಗೆ ೧೯೦೨ರ ಸೆಪ್ಟೆಂಬರ್ ೧೬ರಲ್ಲಿ ಬರೆದ ಕಾಗದದಲ್ಲಿ ಹೀಗೆ ಹೇಳಿದರು :—

"ನಾನು ಪುನಃ ನಿಮಗೆ ತೊಂದರೆ ಕೊಡುತ್ತಿದ್ದೇನೆ, ಕ್ಷಮಿಸಬೇಕು. ನಿಮಗೆ ಬೇಕಾದ ಕೋಟಿ ರೂಪಾಯಿಗಳ ಮೂಲಧನವನ್ನು ನಮ್ಮ ದೇಶೀಯ ರಾಜರುಗಳ ಕಡೆಯಿಂದ ಸಂಗ್ರಹ ಮಾಡುವುದು ಸಾಧ್ಯವಿಲ್ಲವೆ? ಇಂಡಿಯಾ ದೇಶಕ್ಕೆ ಸ್ವಭಾವಸಿದ್ಧವಾಗಿ ಬಂದಿರುವ ಸಂಪತ್ತನ್ನು ಅನ್ಯದೇಶೀಯರು ಹೊತ್ತುಕೊಂಡು ಹೋಗುವ ಅವಕಾಶಕ್ಕೆ ನೀವು ಸಾಧನಭೂತವಾಗಬೇಕೆಂಬುದು ನನಗೆ ದುಃಖದ ವಿಷಯವಾಗಿದೆ. ಅದರಿಂದ ನಮಗಾಗುವ ಪ್ರಯೋಜನ—ನಮ್ಮ ಜನ ಒಂದೆರಡು ಸಾವಿರ ಮಂದಿಗೆ ಕೂಲಿ ಕೆಲಸ ದೊರೆಯುವುದೆಷ್ಟೋ ಅಷ್ಟೇ. ಅದು ಇಂಡಿಯಾ ದೇಶಕ್ಕೆ ಒಂದು ದೊಡ್ಡ ಹಾನಿಯೆಂದು ನನಗೆ ಅನ್ನಿಸುತ್ತದೆ. ಈ ನಮ್ಮ ಸ್ವಾಭಾವಿಕ ಸಂಪತ್ತನ್ನು ಹೊರಗಿನವರು ಹೊತ್ತುಕೊಂಡು ಹೋಗುವುದಕ್ಕಿಂತ ನಮ್ಮ ಭೂಮಿಯಲ್ಲಿಯೇ ಅದು ಉಳಿದು ಕೊಳೆಕೊಂಡಿರುವುದು ಲೇಸೆಂದು ನನಗನ್ನಿಸುತ್ತದೆ.....ನನ್ನ ಮನೋಭಾವವನ್ನು ನೀವು ಗ್ರಹಿಸಿ ಈ ನನ್ನ ಸೂಚನೆಯನ್ನು ಆಲೋಚಿಸುವಿರೆಂದು ನಂಬಿದ್ದೇನೆ."

ಇದಕ್ಕೆ ತಾತಾ ಅವರು ಉತ್ತರ ಬರೆದು ದಾದಾಭಾಯಿಯವರ ಸಲಹೆಯನ್ನು ತಾವು ಬಹು ಸಂತೋಷದಿಂದ ಅಂಗೀಕರಿಸುವುದಾಗಿಯೂ, ದಾದಾಭಾಯಿಯವರಂಥ ಸ್ನೇಹಿತರು ಬೇಕಾದ ಬಂಡವಾಳವನ್ನು ಇಂಡಿಯದಲ್ಲಿಯೇ ಒಟ್ಟುಗೂಡಿಸಲು ಸಹಾಯ ಮಾಡಿದರೆ, ಆ ಹಣದ ಮೇಲೆ, ತಾವು ಇಂಗ್ಲೆಂಡಿನಲ್ಲಿ ಅದನ್ನು ಸಾಲ ತೆಗೆದಿದ್ದರೆ ಹೇಗೆ ಬಡ್ಡಿ ತೆರುತ್ತಿದ್ದರೋ ಅದೇ ದರದಂತೆಯೇ ಇಲ್ಲಿಯೂ, ಬಡ್ಡಿ ಕೊಡಲು ಸಿದ್ಧರಿರುವುದಾಗಿಯೂ ತಿಳಿಯಪಡಿಸಿದರು. ಈ ಕೋರಿಕೆಯಂತೆ ನವರೋಜಿಯವರು ತಾತಾ ಅವರಿಗೆ ಬಂಡವಾಳ ಒದಗಿಸಲು ಸರ್ವ ಪ್ರಯತ್ನಗಳನ್ನೂ ನಡಸಿದರು. ೧೯೦೩ರ ಫೆಬ್ರುವರಿ ೨೦ರಲ್ಲಿ ತಾತಾ ಅವರು ನವರೋಜಿಯವರಿಗೆ ಹೀಗೆ ಕಾಗದ ಬರೆದರು:—

"ನನ್ನ ಕಬ್ಬಿಣದ ಮತ್ತು ಉಕ್ಕಿನ ಕಾರಖಾನೆಯ ಯೋಚನೆಯ ವಿಷಯದಲ್ಲಿ ತಾವು ಕೊಟ್ಟಿರುವ ಸಹಾಯಕ್ಕಾಗಿ ನಾನು ಸಂತೋಷವುಳ್ಳವನಾಗಿದ್ದೇನೆ ಮತ್ತು ಮನಃಪೂರ್ವಕವಾಗಿ ಕೃತಜ್ಞನಾಗಿದ್ದೇನೆ. ಬೇಕಾಗಿರುವ ಬಂಡವಾಳವೆಲ್ಲವೂ ಇಂಡಿಯದಲ್ಲಿಯೇ ದೊರೆಯುವುದು ಅಸಾಧ್ಯವಲ್ಲವೆಂದು 'ಕೈಸರ್-ಇ-ಹಿಂದ್' ಪತ್ರಿಕೆಯು ಅಭಿಪ್ರಾಯ ಸೂಚಿಸಿರುವುದನ್ನು ನಾನೂ ಒಪ್ಪಬೇಕೆನಿಸುತ್ತದೆ. ಒಬ್ಬ ಪಾರಸಿ ದೊಡ್ಡ ಮನುಷ್ಯರು ಅಪ್ರಾರ್ಥಿತರಾಗಿ ಒಂದು ಲಕ್ಷ ರೂಪಾಯಿ ವಾಗ್ದಾನ ಮಾಡಿದ್ದಾರೆ. ಈ ನನ್ನ ಯೋಚನೆ ನೆರವೇರಬೇಕಾದರೆ ತಮ್ಮಂತೆ ದೇಶಸೇವೆಯಿಂದ ಮನ್ನಣೆ ಪಡೆದಿರುವವರ ಬೆಂಬಲವಿಲ್ಲದೆ ಆಗದು. ಈಗ ಇನ್ನೂ ಪರೀಕ್ಷಾ ಪ್ರಯೋಗಗಳನ್ನು ನಡಸುತ್ತಿದ್ದೇವೆ. ನಾಲ್ಕೈದು ಲಕ್ಷ ರೂಪಾಯಿ ಮಾತ್ರ ಹಾಕಿ ಯಂತ್ರಗಳನ್ನು ತೆಗೆದು ಕೆಲಸ ಮಾಡುತ್ತಿದ್ದೇವೆ. ಅದರಲ್ಲಿ ಜಯದ

ನರವಸೆ ಖಂಡಿತವಾಗಿ ತೋರಿಬರುವವರೆಗೂ ಬಂಡವಾಳಕ್ಕಾಗಿ ಇತರರನ್ನು ಚಂದಾ ಕೇಳಕೂಡದೆಂದು ನಿಶ್ಚಯಿಸಿಕೊಂಡಿದ್ದೇನೆ."

ಆ ಮಹಾ ಪ್ರಯತ್ನವು ಇನ್ನೂ ಪರೀಕ್ಷಾದಶೆಯಲ್ಲಿದ್ದಾಗಲೇ ಾತಾ ಅವರು ತೀರಿಕೊಂಡರು. ಆ ಪರೀಕ್ಷೆ ಮುಗಿದು ಜಯದ ರವಸೆ ತೋರಿದ ಬಳಿಕ ಬಂಡವಾಳ ಶೇಖರಿಸುವ ಪ್ರಯತ್ನ ಡೆದದ್ದು ೧೯೦೭ರ ಆಗಸ್ಟ್‌ನಲ್ಲಿ. ಆಗ ಮೂರು ವಾರಗಳ ಕಾಲ ಗಲೂ ರಾತ್ರಿಯೂ ತಾತಾ ಕಂಪನಿಯ ಆಫೀಸಿಗೆ ಹಣ ಬಂದು ುರಿದು ಸಮಗ್ರ ಬಂಡವಾಳವೂ ಇಂಡಿಯದಿಂದಲೇ ದೊರೆತ ದ್ದಾಯಿತು. ಈ ಮಹಾಕಾರ್ಯ ಸಾಧನೆಯನ್ನು ನೋಡಿ ಂತೋಷಿಸುವ ಭಾಗ್ಯ ನವರೋಜಿಯವರದಾಯಿತು.

## ಲೇಖನ ಸಂಗ್ರಹ

ಇಂಡಿಯದ ಕಷ್ಟನಿಷ್ಠುರಗಳನ್ನು ಕುರಿತು ದಾದಾಭಾಯಿ ುವರು ಆಗಾಗ ಮಾಡಿದ್ದ ಉಪನ್ಯಾಸಗಳೂ, ಬರೆದಿದ್ದ ಪತ್ರ ೀಖನಗಳೂ, ಸಭೆ ಸಮಿತಿಗಳಿಗೆ ಕೊಟ್ಟಿದ್ದ ಹೇಳಿಕೆಗಳೂ ಒಂದು ಪ್ರೋದ್ಘಾತದೊಡನೆ ಕೂಡಿ ಒಟ್ಟಿಗೆ ೬೯೦ ಪುಟಗಳ ಒಂದು ಾಡ್ಡ ಗ್ರಂಥವಾಗಿ ೧೯೦೧ರಲ್ಲಿ ಇಂಗ್ಲೆಂಡಿನಲ್ಲಿ ಪ್ರಕಟವಾಯಿತು. ದರ ಹೆಸರು—"ಇಂಡಿಯದಲ್ಲಿ ದಾರಿದ್ರ್ಯ ಮತ್ತು ಬ್ರಿಟಿಷ್ ಯೋಗ್ಯವಾದ ಆಧಿಪತ್ಯ" ಎಂದು. ಈ ಹೆಸರಿನಿಂದಲೇ ಂಥದ ತಾತ್ಪರ್ಯವು ಸ್ಪಷ್ಟವಾಗುತ್ತದೆ. ಈ ಗ್ರಂಥವು ತಕ್ಕ ಂಕಿ ಸಂಗತಿಗಳ ಉದಾಹರಣೆಗಳಿಂದ ತುಂಬಿ ಪ್ರಮಾಣ ಗ್ರಂಥ ಂದೆನಿಸಿಕೊಂಡು ಬಹುಕಾಲ ಇಂಡಿಯಾ ಭಕ್ತರಿಗೆ ಕೈಪಿಡಿಯಂ ತ್ತು. ಇದರಿಂದ ದಾದಾಭಾಯಿಯವರ ಪ್ರಸಿದ್ಧಿ ಮತ್ತೂ ಸ್ತಾರವಾಗಿ ಹರಡಿ ಸ್ಥಿರಪಟ್ಟಿತು.

೧೯೦೪ರಲ್ಲಿ ಯೂರೋಪ್ ಖಂಡದ ನಾನಾ ಜನಾಂಗಗಳ ಪ್ರಜಾಪ್ರಭುತ್ವವಾದಿಗಳು ಆಮ್‌ಸ್ಟರ್‌ಡಾಮ್ ಪಟ್ಟಣದಲ್ಲಿ ಒಂದು ಸಭೆ ನಡಸಿದರು. ಆಗ ನವರೋಜಿಯವರು ಇಂಡಿಯದ ಪ್ರತಿನಿಧಿಯಾಗಿ ಆ ಸಭೆಯಲ್ಲಿ ನಿಂತು, ಇಲ್ಲಿಯ ವೇತನಜೀವಿ (ಬ್ಯುರೋಕ್ರಸಿ) ಪ್ರಭುತ್ವವನ್ನು ಖಂಡಿಸಿ, ಪ್ರಜಾಯತ್ತ ಸ್ವರಾಜ್ಯದ ಪರವಾಗಿ ಭಾಷಣ ಮಾಡಿದರು. ಎಂಭತ್ತು ವಯಸ್ಸಿನ ಆ ವೃದ್ಧ ದೇಶಾಭಿಮಾನಿಯು ಅಲ್ಲಿ ತೋರಿದ ಧೈರ್ಯೋತ್ಸಾಹಗಳು ಸಕಲರ ಶ್ಲಾಘನೆಗೂ ಪಾತ್ರವಾದವು.

## ಸ್ವರಾಜ್ಯ ಘೋಷಣೆ

೧೯೦೬ರಲ್ಲಿ ಅವರು ಸ್ವದೇಶಕ್ಕೆ ಹಿಂದಿರುಗಬೇಕಾಯಿತು. ಆಗ ಇಲ್ಲಿಯ ರಾಜಕೀಯ ಕಾರ್ಯಸ್ಥರಲ್ಲಿ ಖಂಡಿತವಾದಿಗಳ (ಎಕ್ಸ್‌ಟ್ರೀಮಿಸ್ಟ್) ಉಪಾಯವಾದಿಗಳು (ಮಾಡರೇಟ್) ಎಂಬ ಎರಡು ಪಂಗಡಗಳುಂಟಾಗಿ, ಪರಸ್ಪರ ವೈಮನಸ್ಯವು ತಲೆದೋರಿ ಕಾಂಗ್ರೆಸ್ ಸಭೆಯು ಒಡೆದುಹೋಗುವ ಭಯವು ಹುಟ್ಟಿತ್ತು. ಅಂಥ ಸಮಯದಲ್ಲಿ "ಉಭಯ ಕುಲ ಪಿತಾಮಹ" ರೆನ್ನಿಸಿಕೊಳ್ಳಲು ಅರ್ಹರಾಗಿದ್ದ ನವರೋಜಿಯವರೊಬ್ಬರೇ ಆ ಸಭೆಯ ಅಗ್ರಾಸನಕ್ಕೆ ತಕ್ಕವರೆಂದು ಎರಡು ಕಕ್ಷಿಗಳವರೂ ತೀರ್ಮಾನಿಸಿದರು. ಅದರಂತೆ ತಾವು ಹಸ್ತಿಭಾರ ಹಾಕಿ ಕಟ್ಟಿಸಿದ ಮನೆಗೆ ತಾವೇ ಯಜಮಾನರಾಗಿ ನಿಲ್ಲಲು ನವರೋಜಿಯವರು ಮೂರನೆಯ ಸಲ ಬರಬೇಕಾಯಿತು. ಆಗ ಅವರು ಸ್ವರಾಜ್ಯ ತತ್ತ್ವವನ್ನು ಪ್ರತಿಪಾದಿಸಿ ಮಾಡಿದ ಉಪನ್ಯಾಸದಲ್ಲಿಯ ವಾಕ್ಯಗಳು ಅಂದಿನಿಂದ ಭಾರತೀಯರಿಗೆ ಮೂಲಮಂತ್ರವಾಗಿ ಪರಿಣಮಿಸಿದವು. "ಸ್ವರಾಜ್ಯ" ಎಂಬ ಪದವನ್ನು ರಚಿಸಿ ನಮ್ಮ ರಾಜಕೀಯದಲ್ಲಿ

ಅದನ್ನು ಮೊದಲು ಉಪಯೋಗಿಸಿದವರು ಅವರೇ,—ಆಗಲೇ. ಜನರ ಯೋಗಕ್ಷೇಮಗಳಿಗೆ ಅವರ ರಾಜಕೀಯ ಬಲಾಬಲಗಳೇ ಮೂಲಕಾರಣವೆಂಬುದನ್ನೂ, ವಿದೇಶೀಯರು ಮಾಡುವ ರಾಜ್ಯ ಪರಿಪಾಲನೆಯು ಎಷ್ಟು ಸುಖಕರವಾಗಿ ಕಂಡರೂ ಅದು ಸ್ವದೇಶೀ ಯರು ತಮಗೆ ತಾವೇ ಮಾಡಿಕೊಳ್ಳಬಲ್ಲ ಸ್ವಯಂ ಪರಿಪಾಲನೆಗೆ ಎಂದಿಗೂ ಸಮನಾಗಲಾರದೆಂಬುದನ್ನೂ, ರಾಜಕೀಯ ಸ್ವಾತಂತ್ರ್ಯ ವನ್ನು ಸಂಪಾದಿಸಿ ಪ್ರಜಾಪ್ರತಿನಿಧಿ ಪ್ರಭುತ್ವವನ್ನು ಸ್ಥಾಪಿಸು ವುದು ಭಾರತೀಯರ ಪ್ರಥಮ ಕರ್ತವ್ಯವೆಂಬುದನ್ನೂ ನವರೋಜಿ ಯವರು ತಕ್ಕ ಉದಾಹರಣೆಗಳೊಡನೆಯೂ, ಬ್ರಿಟಿಷ್ ರಾಜ್ಯ ನೀತಿಜ್ಞರ ಪ್ರಮಾಣ ವಚನಗಳೊಡನೆಯೂ ಆಗ ವಿಶದವಾಗಿ ಬೋಧಿಸಿದರು.

ಸ್ವರಾಜ್ಯ, ಸಾರ್ವಜನಿಕ ಪ್ರಭುತ್ವ, ಪ್ರಜಾಸ್ವಾಮ್ಯ, ಪ್ರಜಾ ಸ್ವಾತಂತ್ರ್ಯ, ಸಾಂಕುಶ ಶಾಸನ, "ಹೋಮ್-ರೂಲ್" ಇವೆಲ್ಲವೂ ಏಕಾರ್ಥ ಪದಗಳು. ಒಂದು ದೇಶದಲ್ಲಿ ರಾಜ, ಅಥವಾ ರಾಜ್ಯ ಪ್ರಸ್ತೋಪಜೀವಿಗಳಾದ ಅಧಿಕಾರಿಗಳು,—ಇವರು ಅದೇ ದೇಶದ ರೆಂಬಷ್ಟು ಮಾತ್ರದಿಂದಲೇ ಅದು ಸ್ವರಾಜ್ಯವೆನಿಸಲಾರದು. ಆ ರಾಷ್ಟ್ರದ ಎಲ್ಲಾ ಆಡಳಿತಗಳೂ ಅಲ್ಲಿಯ ಜನ ಸಾಮಾನ್ಯದ ವಿಚಾ ರಣೆಗೂ ಅಧಿಕಾರಕ್ಕೂ ಆ ಜನರ ಪ್ರತಿನಿಧಿಗಳ ಮೂಲಕ ಒಳ ಪಟ್ಟಿದ್ದರೆ ಆಗ ಅದು ಸ್ವರಾಜ್ಯವಾಗುವುದು. ಇಂಡಿಯಾ ದೇಶದ ಕೆಲವು ಭಾಗಗಳಲ್ಲಿ ರಾಜರುಗಳ ಸ್ವೇಚ್ಛಾಪ್ರಭುತ್ವವೂ, ಇನ್ನು ಕೆಲವು ಭಾಗಗಳಲ್ಲಿ ವೇತನಾರ್ಥಿಯಾದ ಅಧಿಕಾರಿ ವರ್ಗದ ಪ್ರಭು ತ್ವವೂ ನಡೆಯುತ್ತಿದ್ದವಷ್ಟೆ? ಆದರಿಂದ ಪ್ರಜಾಧರ್ಮವೆಂಬುದು ಪ್ರಕಾಶಕ್ಕೆ ಬರಲು ಅವಕಾಶವಿಲ್ಲದೆ ಹೋಗಿ, ಜನರ ರಾಜಕೀಯ ಬುದ್ಧಿಯು ನಶಿಸಿ, ಅವರ ಕಷ್ಟಗಳು ನಿವಾರ್ಯಗಳಾಗಿದ್ದರೂ

ನಿವಾರಣೆ ಪಡೆಯದೆ, ಅವರ ಗತಿಯು ಇತರ ಜನಾಂಗಗಳ ಅಗೌರವಕ್ಕೀಡಾಗಿತ್ತು. ಜನದ ಲೌಕಿಕ ಸುಖಕ್ಕೋಸ್ಕರ ಮಾತ್ರವಲ್ಲದೆ ಅವರ ನೀತಿವಿಕಾಸಕ್ಕೋಸ್ಕರವೂ ಪ್ರಜೆಗಳಿಗೆ ರಾಜಕೀಯಾಧಿಕಾರವು ಆವಶ್ಯಕ—ಇದು ನವರೋಜಿಯವರ ಬೋಧನೆಯ ಮುಖ್ಯಾಂಶ.

## ಕಡೆಯ ದಿನಗಳು

೧೯೦೬ ರಿಂದೀಚೆಗೆ ನವರೋಜಿಯವರು ಬೊಂಬಾಯಿ ಪಟ್ಟಣದ ಬಳಿ ಸಮುದ್ರತೀರದಲ್ಲಿರುವ “ವರ್ಸೋವಾ” ಎಂಬ ಸ್ಥಳದಲ್ಲಿ ತಮ್ಮ ಪುತ್ರೀಪೌತ್ರರ ಮಧ್ಯೆ ವಿಶ್ರಾಂತಿಯಲ್ಲಿರುತ್ತಿದ್ದರು. ವರ್ಷಕ್ಕೊಂದಾವರ್ತಿ ಅವರ ಜನ್ಮದಿವಸೋತ್ಸವವನ್ನು ಭರತಭೂಮಿಯ ನಾನಾ ಪ್ರಾಂತಗಳವರೂ ಸಂಭ್ರಮದಿಂದ ಆಚರಿಸಿ, ಅವರ ಪರವಾಗಿ ಶ್ರೇಯಃಪ್ರಾರ್ಥನೆ ಮಾಡಿ, ಅವರ ಗುಣಾತಿಶಯಗಳನ್ನು ಕೊಂಡಾಡಿ, ತಮ್ಮ ಕೃತಜ್ಞತೆಯನ್ನು ತೋರುತ್ತಿದ್ದರು. ಅದಕ್ಕೆ ಪ್ರತ್ಯುತ್ತರವಾಗಿ ಅವರು ದೇಶಭಕ್ತಿಭರಿತವೂ, ಕರ್ತವ್ಯಜ್ಞಾನದಾಯಕವೂ ಆದ ಒಂದು ಸಂದೇಶವನ್ನು ಪ್ರಕಟಿಸುತ್ತಿದ್ದರು. ಸ್ವರಾಜ್ಯ ವಿಚಾರದಲ್ಲಿ ಹೇಗೆಯೋ ಹಾಗೆಯೇ “ಸ್ವದೇಶೀ” ಪ್ರಯತ್ನ, ಸ್ತ್ರೀವಿದ್ಯಾವಿಚಾರಗಳಲ್ಲಿಯೂ ಅವರ ಆಸಕ್ತಿಯು ತ್ರಿಕರಣಪೂರ್ವಕವಾದದ್ದಾಗಿತ್ತು. ವೈಸ್‌ರಾಯ್ ಲಾರ್ಡ್ ಹಾರ್ಡಿಂಜ್‌ರವರೂ ಇತರ ಅನೇಕ ಮಂದಿ ಪ್ರಸಿದ್ಧ ಸತ್ಪುರುಷರೂ ಅವರಿದ್ದೆಡೆಗೆ ಹೋಗಿ ಸಂದರ್ಶನ ಸುಖವನ್ನೂ ಸಂಭಾಷಣ ಸುಖವನ್ನೂ ಪಡೆದುಕೊಂಡು ಬರುತ್ತಿದ್ದರು. ೧೯೧೬ರಲ್ಲಿ ಬೊಂಬಾಯಿ ಯೂನಿವರ್ಸಿಟಿಯವರು ತಾವು ಕೊಡಬಹುದಾದ ಬಿರುದುಗಳಲ್ಲಿ ಉತ್ತಮೋತ್ತಮವಾದ ಡಾಕ್ಟರ್-

ಆಫ್-ಲಾಸ್ (ಸಕಲಶಾಸ್ತ್ರಕೋವಿದ) ಎಂಬ ಪ್ರಶಸ್ತಿಯನ್ನು ನವರೋಜಿಯವರಿಗೆ ಸಮರ್ಪಿಸಿದರು. ಹೀಗೆ ಸಕಲರಿಂದಲೂ ಸಮ್ಮಾನ್ಯರಾಗಿ, ನಿಜದೇಶೀಯರಿಗೆ ದೇಶಿಕರೆನಿಸಿ, ದೇಶಕಾರ್ಯದಲ್ಲಿ ಪ್ರೋತ್ಸಾಹವನ್ನೂ ಬುದ್ಧಿವಾದವನ್ನೂ ಕೊಡುವವರಾಗಿದ್ದ ನವರೋಜಿಯವರು ೧೯೧೭ನೆಯ ಇಸವಿ ಜೂನ್ ೩೦ನೆಯ ದಿನ ತಮ್ಮ ೯೨ನೆಯ ವರ್ಷದಲ್ಲಿ ಜೀರ್ಣ ಕಳೇಬರವನ್ನು ತ್ಯಜಿಸಿದರು.

ಭಾರತೀಯರ ಸುಕೃತ ।
ಭೂರುಹದೊಳಿದ್ದೊಂದು ।
ಚಾರುಪರಿಪಕ್ವಫಲ ವಗಲಿ ಬೀಳೆ ॥
ಸಾರಬುದ್ಧಿಗಳದರ ।
ಸಾರವಂ ಗ್ರಹಿಸರೇಂ ।
ಭೂರುಹಶತಂಗಳದರಿಂದೊಗೆಯವೇಂ ॥

ಸಹಸ್ರ ಪೂರ್ಣಚಂದ್ರ ದರ್ಶನದ ಪ್ರಾಪ್ತಿ ಯಾರಿಗುಂಟೋ ಆತನು ಪುಣ್ಯಶಾಲಿಯೆಂದು ಹಿಂದೂ ಜನರಲ್ಲಿ ಹೇಳಿಕೆಯುಂಟು. ಇಷ್ಟು ದೀರ್ಘಕಾಲ ಲೋಕೋಪಕಾರಿಯಾಗಿರಲು ಅವಕಾಶ ದೊರೆತಿರುವುದು ಸುಕೃತವಿಶೇಷವೇ ಅಲ್ಲವೆ? ಎಪ್ಪತ್ತು ವರ್ಷ ಕಾಲ ಎಡೆಬಿಡದೆ ಸ್ವಜನಸೇವೆ ಮಾಡುವ ಯೋಗವು ನವರೋಜಿಯವರಿಗೆ ದೊರೆತಿತ್ತು. ಅದಕ್ಕೆ ತಕ್ಕ ಪ್ರಜ್ಞಾವಿಶೇಷವೂ ಸಾಧನಸಂಪತ್ತೂ ಅವರಲ್ಲಿ ಸೇರಿದ್ದದ್ದು ಮಾತ್ರವಲ್ಲದೆ ಸದ್ಗುಣವಿಶೇಷವೂ ಅವರಲ್ಲಿ ಸಹಜವಾಗಿದ್ದುವು. ಅವರು ತಮ್ಮ ರಾಜಕೀಯ ವರ್ತನದಲ್ಲಿ ಎಷ್ಟು ನಿರ್ಭೀತರೂ ನಿಷ್ಕಪಟಿಗಳೂ ಆಗಿದ್ದರೋ, ತಮ್ಮ ದಿನಚರಿಯ ನಡೆನುಡಿಗಳಲ್ಲಿ ಅಷ್ಟು ಶಾಂತರೂ ದಯಾವಂತರೂ ಆಗಿದ್ದರು. ಮನೋವಾಕ್ಕರ್ಮಗಳಲ್ಲಿ ಅವರು ಸದಾ

ನಿಷ್ಕಲ್ಮಷರಾಗಿಯೂ, ಈಶ್ವರಾರಾಧನ ಪರರಾಗಿಯೂ, ಸದಾಚಾರ ಶೀಲರಾಗಿಯೂ ಇದ್ದರು. ಅವರ ಮರಣಾನಂತರ ಪಾರ್ಸಿ ಜನರು ಅವರನ್ನು ತಮ್ಮ ಆಚಾರ್ಯ ಪರಂಪರೆಗೆ ಸೇರಿಸಿಕೊಂಡು ಹವ್ಯಕವ್ಯ ಸಮಯಗಳಲ್ಲಿ ಇತರ ಋಷಿಗಳಂತೆ ಅವರೂ ಧ್ಯಾನಾ ರ್ಹರೆಂದು ಕ್ರಮವಾಗಿ ತೀರ್ಮಾನಿಸಿದರು. ಇದರಿಂದ ನವರೋಜಿ ಯವರ ವೃತ್ತಿಯು ಎಷ್ಟು ಪರಿಶುದ್ಧವಾದದ್ದಾಗಿತ್ತೆಂಬುದು ತೋರಿ ಬರುತ್ತದೆ. ಆಹಾರವಿಹಾರಗಳಲ್ಲಿ ಅವರು ಯಾವ ಅನಾಚಾರಕ್ಕೂ ಒಡಂಬಟ್ಟವರಲ್ಲ. ಹೊಗೆಯಸೊಪ್ಪನ್ನು ಕೂಡ ಯಾವ ರೂಪ ದಲ್ಲಿಯೂ ಸೇವಿಸಿದವರಲ್ಲ. ಶುಚಿವಂತರಾಗಿಯೂ ನಿಯಮ ವಂತರಾಗಿಯೂ ಇದ್ದ ಕಾರಣದಿಂದಲೇ ಅವರು ಅಷ್ಟು ದೀರ್ಘ ಕಾಲ ಆರೋಗ ದೃಢಕಾಯತೆಯಿಂದ ಪರೋಪಕಾರಿಯಾಗಿ ಬಾಳಲು ಸಾಧ್ಯವಾಯಿತೆಂಬುದಕ್ಕೆ ಸಂದೇಹವಿಲ್ಲ.

ಅವರ ಜೀವನ ಚರಿತ್ರೆಯಿಂದ ನಾವು ಕಲಿಯಬಹುದಾದ ನೀತಿಗಳಲ್ಲಿ ಮುಖ್ಯವಾದವು ಯಾವುವೆಂದರೆ—

(೧) ರಾಜಕೀಯ ವಿಷಯ ವಿಚಾರಣೆಯು ಎಲ್ಲರಿಗೂ ಪ್ರಥಮ ಕರ್ತವ್ಯ. ಅದು ಯಾರಿಗೂ ನಿಷಿದ್ಧಕಾರ್ಯವಲ್ಲ. ಆ ಒಂದು ಧರ್ಮವನ್ನು ನಿರಾಕರಿಸಿದ ಕಾರಣದಿಂದ ನಮ್ಮ ದೇಶವು ಹೀನಸ್ಥಿತಿಗೆ ಇಳಿಯಿತು. ಜನರ ವಿದ್ಯೆ, ವ್ಯಾಪಾರ, ವ್ಯವಸಾಯ ಮುಂತಾದ ಸಕಲ ಸೌಭಾಗ್ಯಗಳಿಗೂ ರಾಜಕೀಯ ವ್ಯವಸ್ಥೆಯೇ ಮುಖ್ಯವಾದ ಆಧಾರ.

(೨) "ಸ್ವರಾಜ್ಯ"ವೇ ಸರ್ವೋತ್ತಮವಾದ ರಾಜ್ಯಭಾರ ಕ್ರಮ. ಸ್ವರಾಜ್ಯವೆಂದರೆ ಪರದೇಶೀಯ ಅಧಿಕಾರಿಗಳನ್ನು ವರ್ಜಿ ಸುವುದು ಮಾತ್ರವಲ್ಲ; 'ಸ್ವ' ಎಂದರೆ ದೇಶೀಯರೆಲ್ಲರಿಂದಲೂ

ಗುವ, ಅಥವಾ ದೇಶಕ್ಕೆ ಮೂಲಭೂತರಾದ ಪ್ರಜೆಗಳೆಲ್ಲರೂ
ತ ಏರ್ಪಾಟಿನಿಂದ ನಡೆಯಿಸುವ, 'ರಾಜ್ಯ' ಎಂದರೆ ಸರಕಾರ.
ದು ಈಗ ಪ್ರಪಂಚದ ಎಲ್ಲಾ ಮುಖ್ಯ ಜನಾಂಗಗಳಲ್ಲಿಯೂ
ಶ್ರೇಷ್ಠವೆನಿಸಿರುವ ಪ್ರಭುತ್ವ ಪದ್ಧತಿ. ಅದನ್ನು ಸಾರ್ಥಕಗೊಳಿಸಲು
ಮಸ್ತರೂ ಪ್ರಯತ್ನಿಸಬೇಕು.

(೩) ಜಾತಿ ಮತ ವೈಷಮ್ಯಗಳನ್ನು ಬಿಟ್ಟು ಜನಪದ
ಾವವನ್ನು ವೃದ್ಧಿಗೊಳಿಸಬೇಕು. ನವರೋಜಿಯವರು ಪಾರ್ಸೀ
ೀಶದಿಂದ ಇಲ್ಲಿಗೆ ಬಂದ ಒಂದು ಸಣ್ಣ ಜನಾಂಗಕ್ಕೆ ಸೇರಿದವ
ಾದರೂ, ಮತ್ತು ತಾವು ಆ ಜನಾಂಗದಲ್ಲಿ ಅಭಿಮಾನವನ್ನು
ಂಪೂರ್ಣವಾಗಿಟ್ಟಿದ್ದವರಾದರೂ—ತಮ್ಮ ದೇಶವು ಇಂಡಿಯವೇ
ಂದು ಭಾವಿಸಿ, ಹಿಂದೂ ಮಹಮ್ಮದ ಮೊದಲಾದ ಸಕಲ ಮತ
ಳವರನ್ನೂ ಸ್ವಜನವೆಂದೇ ತಿಳಿದಿದ್ದರು. ನಮ್ಮ ಐಕಮತ್ಯಕ್ಕೆ
ವರು ಆದರ್ಶಪ್ರಾಯರು.

(೪) ಅವರು ಯಾವ ಮಾತನ್ನಾಡಿದರೂ, ಅಥವಾ ಯಾವ
ಂಗತಿಯನ್ನುದಾಹರಿಸಿದರೂ ಅದು ನಿರಾಧಾರವಾಗಿರದು. ಅವರು
ಷ್ಟಿಯಿಂದ ಗ್ರಂಥಾವಲೋಕನ ಮಾಡಿ, ವಿಷಯಗಳನ್ನು ಸಂಗ್ರ
ಸಿ, ಲೆಕ್ಕಪತ್ರಗಳನ್ನು ಬೇಸರವಿಲ್ಲದೆ ಪರಿಶೋಧಿಸಿ, ಅದರಿಂದ
ಮ್ಮ ಸಿದ್ಧಾಂತಗಳನ್ನು ಪುಷ್ಟೀಕರಿಸುತ್ತಿದ್ದರು. ಬಾಯಿಗೆ
ಂದಂತೆ ಸಮಯಕ್ಕೆ ತೋಚಿದಂತೆ ಹರಟುತ್ತಿರಲಿಲ್ಲ.

(೫) ಸಾರ್ವಜನಿಕ ಪ್ರಯತ್ನಗಳಲ್ಲಿ ಕಾರ್ಯಸಿದ್ಧಿ ಸುಲಭ
ಲ್ಲ. ಬಗೆಬಗೆಯ ತೊಡಕುಗಳೂ ತಡೆಕಟ್ಟುಗಳೂ ಅಲ್ಲಿ ಪದೇ
ದೇ ಬರುತ್ತವೆ. ಆದರೂ ಬೇಸರ ಪಡದೆ, ಎದೆಗುಂದದೆ, ಪಟ್ಟ

ನಿಂದ ಕೆಲಸ ಮಾಡಬೇಕು. ದಾದಾಭಾಯಿಯವರಿಗೆ ಎಷ್ಟೋ ಸಲ ಉದ್ದೇಶ ಭಂಗವಾಯಿತು. ಆದರೂ ಅವರು ಪ್ರಯತ್ನ ಬಿಡಲಿಲ್ಲ. ಹಾಗೆ ಪುನಃ ಪುನಃ ಪ್ರಯತ್ನ ನಡಸುವುದರಿಂದ ಜನರಿಗೆ ವಿಷಯ ಮನದಟ್ಟಾಗುತ್ತದೆ. ಅದೇ ಒಂದು ಲಾಭ. ಒಂದು ಸಲದ ಯತ್ನ ನಿಷ್ಫಲವಾಯಿತೆಂದು ರಾಷ್ಟ್ರಕನು ನಿರುತ್ಸಾಹಿಯಾಗ ಬಾರದು. ರಾಜಕೀಯ ಪರಿಸ್ಥಿತಿಗಳು ಸರಿಯಾಗಬೇಕಾದರೆ ರಾಷ್ಟ್ರಕನು ಅದಕ್ಕಾಗಿ ಪದೇಪದೇ ಬೇಸರವಿಲ್ಲದೆ ಶ್ರಮ ಪಡಬೇಕು.

ದಾದಾಭಾಯಿಯವರು ಎಂಥೆಂಥ ವಿಷಯಗಳನ್ನು ವ್ಯಾಸಂಗ ಮಾಡಿ ಹೇಗೆ ಹೇಗೆ ದೇಶಸ್ಥಿತಿಯನ್ನು ಮಹಾಜನರ ಅವಗಾಹನೆಗೆ ತಂದರೆಂಬುದು ಈ ಕೆಳಗಣ ಅವರ ಭಾಷಣ ಲೇಖನ ಸಾರಾಂಶ ಪಟ್ಟಿಯಿಂದ ತಕ್ಕಮಟ್ಟಿಗೆ ವ್ಯಕ್ತವಾದೀತು.



# ದಾದಾಭಾಯಿ ನವರೋಜಿಯವರ ಭಾಷಣ ಲೇಖನಗಳಲ್ಲಿ ಅತಿ ಮುಖ್ಯವಾದವು

## I ಭಾ ಷ ಣ ಗ ಳು

### (ಅ) ಕಾಂಗ್ರೆಸ್—

೮೮೫. (೧) ಬೊಂಬಾಯಿ (i) ಕಾಂಗ್ರೆಸ್ಸಿನ ಮೊದಲನೆಯ ಅಧಿವೇಶನದಲ್ಲಿ–ಇಂಡಿಯದಲ್ಲಿ ಬ್ರಿಟಿಷ್ ಆಡಳಿತದ ರೀತಿನೀತಿಗಳ ಪರಿಶೀಲನೆಗೆ ಒಂದು ('ರಾಯಲ್ ಕಮಿಷನ್') ನಿಯೋಗ ಮಂಡಲಿಯ ನೇಮಕ. (ii) ಶಾಸನ ಮಂಡಲದ (ಲೆಜಿಸ್ಲೆಟಿವ್ ಕೌನ್ಸಿಲ್) ಸುಧಾರಣೆ. (iii) ಇಂಡಿಯನ್ ಸಿವಿಲ್ ಸರ್ವಿಸ್ ಪರೀಕ್ಷೆಗಳಲ್ಲಿ ಮಾರ್ಪಾಟುಗಳು.

೮೮೬. (೨) ಕಲ್ಕತ್ತೆ. ಅಧ್ಯಕ್ಷ ಭಾಷಣ.

೮೯೩. (೩) ಲಾಹೋರ್. ಅಧ್ಯಕ್ಷ ಭಾಷಣ.

೯೦೬. (೪) ಕಲ್ಕತ್ತೆ. ಅಧ್ಯಕ್ಷ ಭಾಷಣ.

### (ಆ) ಬ್ರಿಟಿಷ್ ಪಾರ್ಲಿಮೆಂಟ್—(ಹೌಸ್ ಆಫ್ ಕಾಮನ್ಸ್ ಸಭೆಗೆ ಸದಸ್ಯರಾಗಿ)

೮೯೨ ಆಗಸ್ಟ್ ೯. (೫) ವಿಕ್ಟೋರಿಯಾ ರಾಣಿಯ ಭಾಷಣದ ಮೇಲಣ ಚರ್ಚೆ ನಡೆದಾಗ, ಭಾರತೀಯರಾದ ತಾವು ಮೊಟ್ಟಮೊದಲು ಪಾರ್ಲಿಮೆಂಟ್ ಸದಸ್ಯರಾದದ್ದನ್ನು ಪ್ರಸ್ತಾವಿಸಿದ್ದು.

೧೮೯೪ ,, ೧೪. (೬) ಇಂಡಿಯದ ಆರ್ಥಿಕ ಪರಿಸ್ಥಿತಿಯನ್ನೂ ಆಡಳಿತದ ಪದ್ಧತಿಯನ್ನೂ ಪರಿಶೀಲಿಸಿ ಸುಧಾರಣೆಯನ್ನು ಸೂಚಿಸಲು ಪಾರ್ಲಿಮೆಂಟಿನ ಸದಸ್ಯ ಸಮಿತಿಯೊಂದು ಸ್ವತಂತ್ರ ವಿಚಾರಣೆ ನಡಸಬೇಕೆಂಬುದು.

೧೮೯೫ ಫೆಬ್ರವರಿ ೨. (೭) ಇಂಡಿಯದಲ್ಲಿ ನೌಕರರಾಗಿ ನೇಮಿಸಲ್ಪಟ್ಟಿರುವ ಯೂರೋಪಿಯನರ ಸಂಬಳಸಾರಿಗೆಗಳಿಗಾಗಿ ಆಗುತ್ತಿರುವ ವೆಚ್ಚದಲ್ಲಿ ನ್ಯಾಯವಾದ ಭಾಗವನ್ನು ಬ್ರಿಟಿಷ್ ಸರಕಾರವೂ ವಹಿಸಿ ಇಂಡಿಯದ ಹೊರೆಯನ್ನಿಳಿಸಬೇಕೆಂಬುದು.

೧೮೯೫ ,, ೨೧. (೮) ಲ್ಯಾಂಕಾಷೈರ್ ಪಟ್ಟಣದಿಂದ ಇಂಡಿಯಕ್ಕೆ ರಫ್ತು ಮಾಡಿದ ಹತ್ತಿ ಬಟ್ಟೆಗಳ ಮೇಲೆ ಭಾರತೀಯರಿಂದ ಸುಂಕ ವಸೂಲು ಮಾಡಬೇಕೆಂಬ ನಿರ್ಣಯವನ್ನು ವಿರೋಧಿಸಿದ್ದು.

## (ಇ) ಇತರ ಭಾಷಣಗಳು—

೧೮೮೪ ನವೆಂಬರ್ ೨೯. (೯) ಬೊಂಬಾಯಿ. ವೈಸ್‌ರಾಯ್ ಲಾರ್ಡ್ ರಿಪನ್ ಅವರ ಆಳಿಕೆ.

೧೮೮೫ ಸೆಪ್ಟೆಂಬರ್ ೨. (೧೦) ಬೊಂಬಾಯಿ. ಇಂಡಿಯದ ರಾಜಕೀಯ ಸ್ನೇಹಿತರಾದ ಪ್ರೊ|| ಫಾಸೆಟ್ ಅವರ ಜ್ಞಾಪಕ ಸಭೆಯಲ್ಲಿ.

೧೮೮೫ ,, ೨೯. (೧೧) ಬೊಂಬಾಯಿ. ಇಂಗ್ಲೆಂಡಿನ ಮಹಾಚುನಾವಣೆಗಳು (೧೮೮೬). ಇಂಡಿಯದ

ಯೋಗಕ್ಷೇಮಕ್ಕಾಗಿ ದುಡಿಯಬೇಕೆಂದು ಬ್ರಿಟಿಷ್ ವರಣಕರ್ತರಲ್ಲಿ ಪ್ರಾರ್ಥನೆ.

೧೮೮೬ ಅಕ್ಟೋ. ೧೫. (೧೨) ವೆಸ್ಟ್‌ಮಿನ್ಸ್ಟರ್ (ಇಂಗ್ಲೆಂಡ್). ಇಂಡಿಯದಲ್ಲಿ ಅಫೀಮು ವ್ಯಾಪಾರ ನಿಷೇಧ.

೧೮೮೬ ಜೂನ್ ೨೭. (೧೩) ಇಂಗ್ಲೆಂಡ್. ತಾವು ಲಿಬರಲ್ ಪಕ್ಷದ ಉಮೇದುವಾರರಾಗಿ ಕಾಮನ್ಸ್ ಸಭೆಯ ಸದಸ್ಯತ್ವಕ್ಕೆ ನಿಂತು, ತಮ್ಮನ್ನು ವರಣ ಮಾಡಿರೆಂದು ಹೋಲ್ಬಾರ್ನ್ ವರಣಕರ್ತರಲ್ಲಿ ವಿಜ್ಞಾಪಿಸಿದ್ದು.

೧೮೮೭ ಜುಲೈ (೧೪) ಈಸ್ಟ್ ಇಂಡಿಯಾ ಅಸೋಸಿಯೇಷನ್, ಲಂಡನ್. ಇಂಡಿಯನ್ ಸಿವಿಲ್ ಸರ್ವಿಸ್ಸನ್ನು ಕುರಿತು.

೧೮೮೭ ಫೆಬ್ರುವರಿ ೧೩. (೧೫) ಬೊಂಬಾಯಿ. ಇಂಗ್ಲೆಂಡಿನ ಮಹಾಚುನಾವಣೆಗಳ ಕಾಲದಲ್ಲಿ ಇಂಡಿಯದ ಪರವಾಗಿ ಪ್ರಚಾರ ಮಾಡಿದ್ದಕ್ಕಾಗಿ ತಮ್ಮನ್ನು ಅಭಿನಂದಿಸಿದ ಸಭೆಗೆ ಪ್ರತ್ಯುತ್ತರ.

೧೯೦೦ ಜುಲೈ ೧. (೧೬) ವಾಲ್ಥಾಮ್ ಸ್ಟೋವ್ (ಇಂಗ್ಲೆಂಡ್). "ಇಂಡಿಯದ ಕ್ಷಾಮ ಪರಿಹಾರ ನಿಧಿ."

೧೯೦೧ ಜನವರಿ ೩೧. (೧೭) ಟಾಯ್ನ್‌ಬೀ ಹಾಲ್, ಲಂಡನ್, "ಇಂಡಿಯದ ವಿದ್ಯಮಾನಗಳು."

೧೯೦೧ ಏಪ್ರಿಲ್ ೩೧. (೧೮) ಕ್ರಾಯ್‌ಡನ್, ಲಂಡನ್. "ಇಂಡಿಯದಲ್ಲಿ ಕ್ಷಾಮಕ್ಕೆ ಕಾರಣ ಮತ್ತು ನಿವಾರಣೋಪಾಯ."

೧೯೦೧ ಜುಲೈ ೪. (೧೯) ನಾರ್ತ್ ಲ್ಯಾಂಬೆತ್ ಲಿಬರಲ್ ಕ್ಲಬ್. "ಬ್ರಿಟಿಷ್ ಪ್ರಜಾಪ್ರಭುತ್ವ ಮತ್ತು ಇಂಡಿಯ."

೧೯೦೨ ಮಾರ್ಚಿ ೨೨. (೨೦) ಲಂಡನ್ ಇಂಡಿಯಾ ಸೊಸೈಟಿ. "ಬ್ರಿಟಿಷ್ ಆಳಿಕೆಯಲ್ಲಿ ಇಂಡಿಯದ ವಿದ್ಯ ಮಾನಗಳು."

೧೯೦೪ ನವೆಂಬರ್. (೨೧) ವೆಸ್ಟ್‌ಮಿನ್ಸ್ಟರ್ (ಇಂಗ್ಲೆಂಡ್). ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಸಂಸ್ಥೆಗ (೨೦ನೆಯ ಅಧಿವೇಶನಕ್ಕೆ) ಅಧ್ಯಕ್ಷರಾದ ಸರ್ ಹೆನ್ರಿ ಕಾಟನ್ ಅವರ ಪ್ರಶಂಸೆ.

೧೯೦೪ ,, (೨೨) ವೆಸ್ಲಿ ಹಾಲ್, ಕ್ಲ್ಯಾಂಪ್ ಹಾಲ್ (ಇಂಗ್ಲೆಂಡ್) "ಇಂಡಿಯಕ್ಕೆ ಇಂಗ್ಲೆಂಡು ಕೊಟ್ಟ ವಾಗ್ದಾನಗಳು."

೧೯೦೫ ಮೇ (೨೩) ಕ್ಯಾಕ್ಸ್‌ಟನ್ ಹಾಲ್, ವೆಸ್ಟ್‌ಮಿನ್ಸ್ಟರ್ (ಇಂಗ್ಲೆಂಡ್). ವೈಸ್‌ರಾಯ್ ಲಾರ್ಡ್ ಕರ್ಜನರು ಭಾರತೀಯರನ್ನೂ ಅವರ ಧರ್ಮ ಗ್ರಂಥಗಳನ್ನೂ ಹಳಿದು ಮಾತನಾಡಿದ್ದರ ಖಂಡನೆ.

## II ಲೇಖನಗಳು

### (ಅ) ಸಾಕ್ಷ್ಯ ಸಾಹಿತ್ಯ—

೧೮೭೧. (೧) ಈಸ್ಟ್ ಇಂಡಿಯಾ ಫಿನಾನ್ಸ್ (ಹಣ ಕಾಸಿನ) ಸಮಿತಿಗೆ ಕೊಟ್ಟ ಹೇಳಿಕೆ. (ಲಂಡ

ನ್ನಿನ ಈಸ್ಟ್ ಇಂಡಿಯಾ ಅಸೋಸಿಯೇಷ
ನ್ನಿನ ಪರವಾಗಿ).

೮೮೧. (೨) ಇಂಡಿಯನ್ ಫ್ಯಾಮಿನ್ (ಕ್ಷಾಮ ವಿಚಾರಣಾ) ಸಮಿತಿಯ ವರದಿಯ ಮೇಲೆ ಟೀಕೆ.

೮೮೬. (೩) ಇಂಡಿಯನ್ ಪಬ್ಲಿಕ್ ಸರ್ವಿಸ್ ಕಮಿಷನ್ನಿನ ಪ್ರಶ್ನಾವಳಿಗೆ ಕೊಟ್ಟ ಉತ್ತರಗಳು.

ಇಂಡಿಯಾ ದೇಶದ ಆಡಳಿತವನ್ನೂ ಸರಕಾರದ ವೆಚ್ಚಗಳನ್ನೂ ಪರಿಶೀಲಿಸಲು ನೇಮಕವಾದ ವೆಲ್ಬಿ (ರಾಯಲ್) ಕಮಿಷನ್ನಿನ ಮುಂದೆ ಸಾಕ್ಷ್ಯ.

೮೯೫ ಅಕ್ಟೋಬರ್ (೪) ಇಂಡಿಯಾ ದೇಶದಲ್ಲಿ ಬ್ರಿಟಿಷರ ಆಡಳಿತ ಮತ್ತು ವೆಚ್ಚಗಳ ನಿರ್ವಹಣೆ.

೮೯೬ ಜನವರಿ ೯. (೫) ಮೇಲಿನದಕ್ಕೆ ಪರಿಪೂರಕವಾಗಿ ಕೊಟ್ಟ ವಿವರಗಳು.

೮೯೬ ಫೆಬ್ರುವರಿ ೧೫. (೬) ಆಡಳಿತದ ವೆಚ್ಚವನ್ನು ಇಂಗ್ಲೆಂಡೂ ಇಂಡಿಯವೂ ಹಂಚಿಕೊಳ್ಳಬೇಕೆಂಬುದು.

೮೯೬ ಮಾರ್ಚಿ ೨೧. (೭) ಉಭಯ ದೇಶಗಳ ಪರಸ್ಪರ ಸಂಬಂಧ.

೮೯೭ ಜನವರಿ ೨೧. (೮) ಇಂಡಿಯದ ಅತೃಪ್ತಿಗೆ ಕಾರಣ.

೮೯೭ ನವೆಂಬರ್ ೩. (೯) ಇಂಡಿಯ ದೇಶೀಯರನ್ನು ಸಿವಿಲ್ ಸರ್ವಿಸಿಗೆ ಸೇರಿಸಿಕೊಳ್ಳಬೇಕೆಂಬುದು.

೮೯೮ ಜುಲೈ ೩೦. (೧೦) ಇಂಡಿಯನ್ ಕರೆನ್ಸಿ (ನಾಣ್ಯ ಚಲಾವಣೆ) ಸಮಿತಿಗೆ ಕೊಟ್ಟ ಹೇಳಿಕೆ.

(ಅ) ಪ್ರಬಂಧಗಳು—

೧೮೬೭ ಜುಲೈ ೫. (೧೧) ಮೈಸೂರು ದೊರೆತನವು (ಟಿಪ್ಪೂ ಸುಲ್ತಾನರ ಪತನಾನಂತರ) ರಾಜಮನೆತನಕ್ಕೇ ಹಿಂತಿರುಗತಕ್ಕದ್ದೆಂದು ವಾದಿಸಿ ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನಲ್ಲಿ ಓದಿದ ಪ್ರಬಂಧ.

೧೮೬೭ ನವೆಂಬರ್ ೨೯. (೧೨) "ಅಬಿಸೀನಿಯಾ ಯುದ್ಧದ ವೆಚ್ಚವನ್ನು ಇಂಡಿಯವೇಕೆ ಹೊರಬೇಕು?" ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನಲ್ಲಿ ಓದಿದ ಪ್ರಬಂಧ.

೧೮೬೭ ಆಗಸ್ಟ್ ೧೩, ಮತ್ತು ೧೮೬೮ ಏಪ್ರಿಲ್ ೧೭. (೧೩) ಇಂಡಿಯನ್ ಸಿವಿಲ್ ಸರ್ವಿಸಿಗೆ ದೇಶೀಯರನ್ನು ಸೇರಿಸಿಕೊಳ್ಳುವ ಕಾಲ ಬಂದಿದೆಯೆಂಬ ಪ್ರತಿಜ್ಞಾವಚನ ಸ್ವೀಕಾರದ ಬಗ್ಗೆ ಈಸ್ಟ್ ಇಂಡಿಯಾ ಅಸೋಸಿಯೇಷನ್ನಿನಲ್ಲಿ ಓದಿದ ಪ್ರಬಂಧಗಳು.

೧೮೮೪ (೧೪) ಇಂಡಿಯನ್ ಸಿವಿಲ್ ಸರ್ವಿಸ್ ಸುಧಾರಣೆಗಳು.

೧೮೬೬ ಮಾರ್ಚಿ ೨೭. (೧೫) "ಯೂರೋಪಿಯನರೂ ಏಷ್ಯದ ಜನಾಂಗಗಳೂ". ಲಂಡನ್ನಿನ ಜನಾಂಗ ವಿಜ್ಞಾನ ಸಂಸ್ಥೆ (ಎತ್ನಲಾಜಿಕಲ್ ಸೊಸೈಟಿ) ಯಲ್ಲಿ ಓದಿದ ಪ್ರಬಂಧ.

೧೮೮೭ ಆಗಸ್ಟ್ (೧೬) ಇಂಡಿಯದ ವಿಚಾರದಲ್ಲಿ (ಹಿಂದೆ ಮದ್ರಾಸ್ ಗವರ್ನರೂ ಬ್ರಿಟಿಷ್ ಮಂತ್ರಿ

ಮಂಡಲದಲ್ಲಿ ಇಂಡಿಯಾ ಉಪಮಂತ್ರಿಯೂ ಆಗಿದ್ದ) ಸರ್ ಎಂ. ಇ. ಗ್ರಾಂಟ್ ಡಫ್ ಅವರು ಹರಡಿದ ತಪ್ಪು ಭಾವನೆಗಳಿಗೆ ಉತ್ತರ 'ಕಾನ್‌ಟೆಂಪೊರರಿ' ಪತ್ರಿಕೆಗೆ ಲೇಖನ.

೮೯೫ ಸೆಪ್ಟೆಂಬರ್ (೧೭) "ರಷ್ಯಾ ದೇಶವು ಇಂಡಿಯದ ಮೇಲೆ ಆಕ್ರಮಣ ನಡಸೀತೆಂಬ ಭೀತಿ" 'ಇಂಡಿಯಾ' ಪತ್ರಿಕೆಗೆ ಲೇಖನ.

೯೦೫ ಏಪ್ರಿಲ್ ೩. (೧೮) ಇಂಡಿಯಾ–ಇಂಗ್ಲೆಂಡ್ ದೇಶಗಳ ಆಮದು–ರಫ್ತು ವ್ಯಾಪಾರದಿಂದ ಇಂಡಿಯಕ್ಕೆ ಆಗುತ್ತಿರುವ ದೊಡ್ಡ ನಷ್ಟ. ಲಂಡನ್ನಿನ 'ಡೆಯ್ಲಿ ನ್ಯೂಸ್' ಪತ್ರಿಕೆಗೆ ಲೇಖನ.

೯೦೫ ನವೆಂಬರ್ ೨೬ (೧೯) ಬನಾರಸ್ ಕಾಂಗ್ರೆಸ್ ಅಧಿವೇಶನಕ್ಕೆ ಸ್ವರಾಜ್ಯ ಧ್ಯೇಯದ ಸಂದೇಶ (ಅಧ್ಯಕ್ಷ ಗೋಖಲೆಯವರಿಗೆ ಬರೆದ ಪತ್ರ).



# ಗುಣ ಮಣಿ ಮಾಲೆ

---

ನಿಜದೇಶಂ ನಿಜಮಾತೃದೇವಿ ನಿಜದೇಶೀಯರ್ನಿಜಭ್ರಾತೃಗಳ್ ।
ನಿಜಸೌಖ್ಯಂ ನಿಜರಾಷ್ಟ್ರಸೌಖ್ಯಮೆ ಎನುತ್ತಂತರ್ಬಹಿಶ್ಶುದ್ಧಿಯಿಂ ॥
ಸುಜನಾರಾಧಿತ ಮಾರ್ಗದೊಳ್ನಡೆದ ದಾದಾಭಾಯಿಯಂ ಧನ್ಯನಂ।
ಭಜಿಪೆಂ ಮಾನಸಶುದ್ಧಿಯಂ ಬಯಸುತುಂ ಶ್ರೀಭಾರತೀಸೇವೆಯೊಳ್ ॥

* ತಾತನಿವನಾತ್ಮೀಯರಿಗೆ ಸಹ ।
ಜಾತನೆಲ್ಲ ಜನರ್ಗೆ ಭಾರತ ।
ಮಾತೆಗಮಿತ ಶುಭೋದಯದ ನವದಿನದ ರವಿಯೆನಿಪಾ ॥
ರೀತಿಯಲಿ ಬಾಳ್ದಖಿಲರಿಂ ಸಂ ।
ಪ್ರೀತನಾದ ಯಥಾರ್ಥನಾಮ ।
ಖ್ಯಾತ ದಾದಾಭಾಯಿ ನವರೋಜಿಯ ಸದಾ ನೆನೆವೆಂ ॥

---

* ತಾತ=ದಾದಾ, ಸಹಜಾತ=ಭಾಯಿ, ನವದಿನ=ನವರೋಜಿ

ತನುಸೌಖ್ಯವನೆ ಕೋರಿ ಧನದಾಸೆಯುಲಿ ಬಳಲು
ತೆನಿಬರೋ ಜನನಿಯನೆ ಮರೆಯುತಿಹರು ।
ಘನವೆನಿಪ ಬಿರುದಾವಳಿಯ ಗಳಿಪ ಚತುರತೆಯೊ
ಳೆನಿಬರೋ ಜೀವನವ ಕಳೆಯುತಿಹರು ।
ನಿಜಜನರ ಮೇಲ್ಮೆಯಂ ನೆನೆಯದರೆನಿಮಿಷಮುಂ
ಪಶುಸುಖದೊಳೆನಿಬರೋ ಮುಳುಗುತಿಹರು ।
ಜಾತಿಭೇದವೆ ಸೋದರತ್ವದಿಂ ಮೇಲೆನ್ನು
ತೆನಿಬರೋ ವೈರದೊಳ್ಮೆರೆಯುತಿಹರು ॥

ದೇಶಹಿತವನೆ ತನ್ನ ಗುರಿಯೊಳಿಡುತೆ ।
ಮುದದಿನಾತ್ಮಾರ್ಪಣೆಯನಾಕೆಗೆಸಗಿ ।
ಮೆರೆವ ಮಹನೀಯರತಿವಿರಳರವರೊಳಿಂದು
ಪೂಜ್ಯನಾ ನವರೋಜಿ ಮೊದಲೆನಿಪನಲ್ತೆ ॥

ಭಾರತೀಯರ ದುಃಖ ದುರ್ಬಲ ದೈನ್ಯ ದಾಸ್ಯಗಳೆಲ್ಲಮಂ ।
ದೂರ ನೀಗುತೆ ವಿದ್ಯೆ ಸೌಖ್ಯ ಸುಸಂಪದಂಗಳ ನೊಂದಿಪಾ ॥
ದಾರಿತೋರಿದ ಬಂಧುವಾ ನವರೋಜಿಯಲ್ತೆ ನಿರಂತರಂ ।
ಪ್ರೇರಿಕಾ ಮಹನೀಯ ನೆನ್ನಯ ಚಿತ್ತವೃತ್ತಿಯ ಧರ್ಮದೊಳ್ ॥

ಪರಮ ಶುಭಚರಿತ್ರಂ ಭಾರತೀ ವೀರಪುತ್ರಂ ।
ಪರಹಿತಕರವೃತ್ತಂ ಸತ್ಯಮಾರ್ಗ ಪ್ರವೃತ್ತಂ ॥
ವಿರಚಿತ ಬಹುಪುಣ್ಯಂ ದೇಶಭಕ್ತಾಗ್ರಗಣ್ಯಂ ।
ಸ್ಫುರಿಕೆ ಮನದಿ ದಾದಾಭಾಯಿ ಯೆಂಬಾ ವರೇಣ್ಯಂ ॥

ಹನುಮ ಭೀಷ್ಮರವೊಲದ್ಭುತ ವೃತ್ತಂ ।
ವಿನಯ ವೀರ ಕರುಣಾಗುಣ ಯುಕ್ತಂ ॥
ಜನಪದೋದ್ಧರಣ ಧರ್ಮಸಮರ್ಥಂ ।
ಮನದೊಳಿರ್ಕೆ ನವರೋಜಿ ಮಹಾತ್ಮಂ ॥

ಸ್ವರಾಜ್ಯಮಂತ್ರಬೋಧಕಂ ಸುರಾಜನೀತಿಕೋವಿದಂ ।
ಪರೇಶಭಕ್ತಿಪೂರಿತಂ ಪರೋಪಕಾರದೀಕ್ಷಿತಂ ॥
ಸ್ಫುರದ್ಯಶಶ್ಶರೀರನಾ ಗುರೂತ್ತಮಂ ಗುಣಾಕರಂ ।
ವಿರಾಜಿಕೆಂದುಮೆನ್ನ ಹೃತ್ಸರೋಜಮಧ್ಯ ಪೀಠದೊಳ್ ॥





# ಮಹಾತ್ಮ ಗಾಂಧಿ

## ಜ್ಞಾಪಕ ಪದ್ಯಸಂಗ್ರಹ

ಎರಡನೆಯ ಮುದ್ರಣ — ಬೆಲೆ : ರೂ. ೦-೪-೦

### ಕೆಲವು ಅಭಿಪ್ರಾಯಗಳು

ಮಹಾತ್ಮಾ ಗಾಂಧಿಯವರ ಜೀವಿತದ ಮಹಾದರ್ಶ ಧ್ಯೇಯಗಳ ಬಗ್ಗೆ ಅವರು ನಮ್ಮ ಹೃದಯ ಮಂದಿರಗಳಲ್ಲಿ ಆಕ್ರಮಿಸಿರುವ ಮಹಾಸ್ಥಾನದ ಬಗ್ಗೆ ಶ್ರೀ. ಡಿ. ವಿ. ಜಿ. ಅವರು ಈ ಕಾಣಿಕೆ ಸಲ್ಲಿಸಿದ್ದಾರೆ. ಈ ೧೪ ಪುಟಗಳ ಕವಿತಾ ಮುಕುಟಕ್ಕಿಂತಲೂ ಬಾಪೂಜಿಯವರಿಗೆ ಅರ್ಪಿಸಬಲ್ಲ ಹೆಚ್ಚಿನ ಕಾಣಿಕೆ ಇನ್ನೇನು ಎನಿಸುತ್ತದೆ. ಓದಿದಂತೆಲ್ಲಾ ಬಾಪೂಜಿಯವರ ಆದರ್ಶ ಚಿತ್ರ ಕಣ್ಣ ಮುಂದೆ ಕಟ್ಟಿದಂತಾಗುತ್ತದೆ. — ತಾಯಿನಾಡು

ಈ ಪದ್ಯದಲ್ಲಿ ಗಾಂಧಿಯವರ ಹಿರಿಮೆಯೇನು ಎಂಬುದನ್ನು ಶ್ರೀ. ಡಿ. ವಿ. ಗುಂಡಪ್ಪನವರು ಸೂತ್ರರೂಪವಾಗಿ ಕೊಟ್ಟಿದ್ದಾರೆ . . . . . . ಗಾಂಧೀಜಿಯವರನ್ನು ಕುರಿತು ಮಾತನಾಡುವುದೆಂದರೆ ಶ್ರೀ. ಡಿ. ವಿ. ಜಿ. ಅವರಿಗೆ ಲೇಖನಿ ಓಡುತ್ತಿರುತ್ತದೆ. ಅವರದು ತೀರ ಹಿಡಿತದ ಕೈ. ಹತ್ತು ಮಾತುಗಳನ್ನು ಹಾಕುವ ಕಡೆ ಒಂದು ಮಾತಿನಲ್ಲಿ ತೃಪ್ತಿಪಡುವ ಅಭ್ಯಾಸ ಅವರದು. ಆದರೆ ೧೯೪೩ರಲ್ಲಿ ಗಾಂಧೀಜಿಯವರ ಉಪವಾಸ ಮುಗಿದು ಪಾರಣೆಯಾದ ಮಾರ್ಚಿ ೩ನೇ ತಾರೀಖಿನ "ಧನ್ಯವಾದ ಸಮರ್ಪಣೆ"ಯಲ್ಲಿ ಅವರ ಸಂತೋಷ ಲೇಖನಿಯನ್ನು ಓಡಿಸುತ್ತಿದೆ.

—ಪುಸ್ತಕ ಪ್ರಪಂಚ

ಮಹಾತ್ಮಾ ಗಾಂಧಿಯವರನ್ನು ನೆನೆದು ಬರೆದ ಈ ಪದ್ಯಗಳು ಕನ್ನಡ ನಾಡಿನ ಹೆಸರಾಂತ ಕವಿ ಶ್ರೀ. ಡಿ. ವಿ. ಜಿ. ಅವರಿಂದ ಬಂದಿವೆಯೆಂದಮೇಲೆ ಹೇಳುವದೇನು? "ಪಿಡಿವೆವೇನದುವೆ ತಿರುಳ್, ನುಡಿವೆವೇನದುವೆ ಹುರುಳ್" ಎಂಬ ಪ್ರಾಸಾದಿಕ ಕವಿಗಳ ಮಾಲಿಕೆಗೆ ಸೇರಿದವರು ಇವರು. ಇವರ ಈ ಪದ್ಯಗಳು ಎಲ್ಲರ ಬಾಯಲ್ಲಿಯೂ ಹೊಳಲುಗೊಡಲಿ. — ಕರ್ಮವೀರ

**ವ್ಯಾಸಂಗ ಗೋಷ್ಠಿ, ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ**

**ಬೆಂಗಳೂರು ೪**

# ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ

## ಬಸವನಗುಡಿ, ಶ್ರೀ ಸುಬ್ಬರಾಮಶೆಟ್ಟಿ ರಸ್ತೆ, ಬೆಂಗಳೂರು

ಸ್ಥಾಪಿತ ೧೯೪೫] [ರಿಜಿಸ್ಟರ್ ಆಗಿದೆ

### ಮುಖ್ಯೋದ್ದೇಶ: ರಾಷ್ಟ್ರಕ ಧರ್ಮದ ವ್ಯಾಸಂಗ

ಮೈಸೂರು ಸಂಸ್ಥಾನದ, ಕನ್ನಡ ನಾಡಿನ ಮತ್ತು ಇಂಡಿಯಾದೇಶದ ಪ್ರಜಾಜನದ ಯೋಗಕ್ಷೇಮಗಳಿಗೋಸ್ಕರವೂ ಹಿತಪ್ರಗತಿಗೋಸ್ಕರವೂ ಕೆಲಸ ಮಾಡುವುದು ಈ ಸಂಸ್ಥೆಯ ಉದ್ದೇಶ.

ಈ ಬಗ್ಗೆ ಏರ್ಪಾಟುಗಳು:—

(೧) ಸಾರ್ವಜನಿಕ ವಿಚಾರಗಳಲ್ಲಿ ಆಸಕ್ತಿಯುಳ್ಳವರನ್ನು ಆಗಾಗ ಸೇರಿಸಿ, ಅವರಿಂದ ಜನದ ಜೀವನದ ಕಷ್ಟಗಳಿಗೂ ಸೌಕರ್ಯಗಳಿಗೂ ಸಂಬಂಧಪಟ್ಟ ಪ್ರಶ್ನೆಗಳನ್ನು ಕುರಿತು ಆಲೋಚನೆ ಮಾಡಿಸುವುದು; (೨) ರಾಜಕೀಯ, ಆರ್ಥಿಕ, ಸಾಮಾಜಿಕ ವಿಚಾರಗಳಿಗೆ ಸಂಬಂಧಪಟ್ಟ ಶಾಸ್ತ್ರಗ್ರಂಥಗಳ ವ್ಯಾಸಂಗಕ್ಕೆ ಅವಕಾಶ ಕಲ್ಪಿಸುವುದು. (೩) ಪ್ರಜೆಗಳ ಹಕ್ಕುಬಾಧ್ಯತೆಗಳನ್ನೂ ಕರ್ತವ್ಯಗಳನ್ನೂ ಕುರಿತು ತಿಳಿವಳಿಕೆ ಕೊಡುವ ಗ್ರಂಥಗಳನ್ನೂ ಪತ್ರಿಕೆಗಳನ್ನೂ ಪ್ರಕಟಿಸುವುದು; (೪) ಉಪನ್ಯಾಸಗಳನ್ನೂ ಚರ್ಚೆಗಳನ್ನೂ ಏರ್ಪಡಿಸುವುದು; (೫) ದೇಶದ ಸ್ಥಿತಿಗತಿಗಳನ್ನು ವಾಸ್ತವಾಂಶ ಪರೀಕ್ಷೆಯಿಂದ ವಿಮರ್ಶೆಮಾಡಿ ವರದಿಗಳನ್ನು ಪ್ರಕಟಿಸುವುದು; (೬) ನಾನಾ ಕಕ್ಷಿ ಪಕ್ಷಗಳವರು ಮಾಡುವ ಸಲಹೆ ಸೂಚನೆಗಳನ್ನು ಸ್ವತಂತ್ರ ದೃಷ್ಟಿಯಿಂದ ಪರಿಶೀಲಿಸುವುದು—ಇತ್ಯಾದಿ.

## ವ್ಯಾಸಂಗ ಗೋಷ್ಠಿ

ವಿದ್ಯಾರ್ಥಿಗಳಿಗೂ ಯುವಜನರಿಗೂ ಪ್ರಜಾಧರ್ಮಕ್ಕೆ ಬೇಕಾದ ರಾಜಕೀಯಾದಿ ಗ್ರಂಥ ವ್ಯಾಸಂಗವನ್ನು ಮಾಡಿಸಿ, ಸಾರ್ವಜನಿಕ ಕಾರ್ಯದ ಅಭ್ಯಾಸಕ್ಕೆ ಅವಕಾಶ ಕಲ್ಪಿಸಿ, ಅವರು ಯಥಾಯೋಗ್ಯವಾಗಿ ಸಾರ್ವಜನಿಕ ಜೀವನದಲ್ಲಿ ಭಾಗವಹಿಸಲರ್ಹರಾಗುವಂತೆ ತಯಾರು ಮಾಡಬೇಕೆಂಬುದು ವ್ಯಾಸಂಗಗೋಷ್ಠಿಯ ಉದ್ದೇಶ.

# ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ

## ವ್ಯಾಸಂಗ ಗೋಷ್ಠಿ ಸಹ

## ಈಗ ನಡಸುತ್ತಿರುವ ಕೆಲಸಗಳು

(೧) ಇಂಗ್ಲಿಷ್, ಕನ್ನಡ ಮತ್ತು ಸಂಸ್ಕೃತ ಭಾಷೆಗಳಪುಸ್ತಕ ಭಂಡಾರ.

(೨) ಧರ್ಮಾರ್ಥ ವಾಚನಾಲಯ–ಸಾರ್ವಜನಿಕರಿಗೆ ಅನೇಕ ವರ್ತಮಾನ ಪತ್ರಿಕೆ ಮಾಸಪತ್ರಿಕೆಗಳನ್ನು ಓದಲು ದೊರಕಿಸುತ್ತಿದೆ.

(೩) ರಾಜ್ಯಶಾಸ್ತ್ರ, ಅರ್ಥಶಾಸ್ತ್ರ, ಸಮಾಜಶಾಸ್ತ್ರ ಮೊದಲಾದ ಶಾಸ್ತ್ರ ವಿಷಯಕ ಗ್ರಂಥಗಳನ್ನೂ ಸಾಹಿತ್ಯ ಸಂಸ್ಕೃತಿ ವಿಷಯಕ ಗ್ರಂಥಗಳನ್ನೂ ವ್ಯಾಸಂಗಮಾಡಲು ಪ್ರತಿಭಾನುವಾರ ತರಗತಿಗಳು.

(೪) ಸಾರ್ವಜನಿಕ ಉಪನ್ಯಾಸಗಳು ಮತ್ತು ಚರ್ಚೆಗಳು.

(೫) ಪೌರ ಸೌಕರ್ಯದ ಮತ್ತು ನೈರ್ಮಲ್ಯದ ಪರಿಶೀಲನೆ; ಸಾಮಾಜಿಕ ಸ್ಥಿತಿಗತಿಗಳ ಪರಿಶೋಧನೆ.

(೬) ಸಾರ್ವಜನಿಕ ವಿಚಾರಗಳಿಗೆ ಸಂಬಂಧಪಟ್ಟ ನಿರ್ಣಯಗಳು ಮತ್ತು ಹೇಳಿಕೆಗಳು.

(೭) ಜ್ಞಾನಪ್ರಸಾರಕ್ಕಾಗಿ ಗ್ರಂಥಗಳ ಮತ್ತು ಲಘು ಪುಸ್ತಕಗಳ ಪ್ರಕಟನೆ.

(೮) ಮಾಸಪತ್ರಿಕೆ: "ಸಾರ್ವಜನಿಕ" (Public Affairs)

—ಇಂಗ್ಲಿಷ್ ಮತ್ತು ಕನ್ನಡ ಭಾಷೆಗಳಲ್ಲಿ.

ಹೆಚ್ಚಿನ ವಿವರಗಳನ್ನು ಕಾರ್ಯದರ್ಶಿಗಳು ತಿಳಿಸುತ್ತಾರೆ.